ಫ್ರೆಡರಿಕ್ ಎಂಗೆಲ್ಸ್

# ವಾನರನಿಂದ ನರನವರೆಗೆ

ವಾನರಾವಸ್ಥೆಯಿಂದ ನರಾವಸ್ಥೆಗೆ ಆಗಿರುವ ಪರಿವರ್ತನೆಯಲ್ಲಿ
ದುಡಿಮೆಯ ಪಾತ್ರ



ಪ್ರಕಾಶಕರು

ಜನಶಕ್ತಿ ಪ್ರಕಾಶನ

ಸುಲ್ತಾನ್‌ಪೇಟೆ, : : ಬೆಂಗಳೂರು-೨

# ವಾನರನಿಂದ ನರನವರೆಗೆ

ವಾನರಾವಸ್ಥೆಯಿಂದ ನರಾವಸ್ಥೆಗೆ ಆಗಿರುವ ಪರಿವರ್ತನೆಯಲ್ಲಿ ದುಡಿಮೆಯ ಪಾತ್ರ

ಮೂಲ
ಫ್ರೆಡರಿಕ್ ಎಂಗೆಲ್ಸ್

ಅನುವಾದ
ಎಸ್. ಎಸ್. ಸೀತಾರಾಮಶಾಸ್ತ್ರಿ

ಬೆಲೆ **13** ನಯಾಪೈಸ

ಪ್ರಕಾಶಕರು
ಜನಶಕ್ತಿ ಪ್ರಕಾಶನ
ಸುಲ್ತಾನ್ ಪೇಟೆ, ಫೋನ್ ೩೮೧೦ ಬೆಂಗಳೂರು-೨

**Fredaric Engels**

# The Part Played By Labour In The Transition From APE TO MAN



*Kannada Translation*

*Rendered by*

**N. S. SEETARAMA SASTRY**

*We thank V/o "Mezhdunarodnaya Kniga", Moscow, 200, USSR for extending their kind co-operation in bringing out this book.*

*—PUBLISHERS*

Printed at JANASHAKTHI PRINTERS, L-59, K. V. Temple Street Sultanpet, Bangalore 2, and Published by C. R. Krishna Rao for JANASHAKTHI PRAKASHANA, Sultanpet, Bangalore 2

*June, 1957* 

# ವಾನರನಿಂದ ನರನವರೆಗೆ

## ವಾನರಾವಸ್ಥೆಯಿಂದ ನರಾವಸ್ಥೆಗೆ ಆಗಿರುವ ಪರಿವರ್ತನೆಯಲ್ಲಿ ದುಡಿಮೆಯು ನಿರ್ವಹಿಸಿರುವ ಪಾತ್ರ

ದುಡಿಮೆಯೆ ಸಕಲ ಸಂಪದದ ಮೂಲ ಎಂದು ಅರ್ಥಶಾಸ್ತ್ರಜ್ಞರು ಸಾಧಿಸುತ್ತಾರೆ. ದುಡಿಮೆ ಎಂದರೆ ಇದು—ಪ್ರಕೃತಿಯನ್ನು ಬಿಟ್ಟರೆ, ಅದು ಒದಗಿಸುವ ಸಾಮಗ್ರಿಗಳನ್ನು ಸಂಪದ್ವಸ್ತುಗಳನ್ನಾಗಿ ಮಾರ್ಪಡಿಸುವ ಸಾಧನ. ಆದರೆ ದುಡಿಮೆ ಎಂದರೆ ಇಷ್ಟೆ ಅಲ್ಲ, ಇದಕ್ಕಿಂತ ಬ್ರಹ್ಮಾಂಡ ಹೆಚ್ಚಿನದು. ದುಡಿಮೆಯು ಮಾನವನ ಎಲ್ಲ ಇರುವಿಕೆಯ ಮೂಲ ಉಪಾಧಿ; ಇದು ಎಷ್ಟು ಮಟ್ಟಿಗೆಂದರೆ, ಒಂದು ಅರ್ಥದಲ್ಲಿ, ದುಡಿಮೆಯೆ ಮನುಷ್ಯನನ್ನು ಸೃಷ್ಟಿಸಿತು ಎಂದು ನಾವು ಹೇಳಬಹುದು.

ಹಲವಾರು ಲಕ್ಷ ವರ್ಷಗಳ ಕೆಳಗೆ, ಇನ್ನೂ ಖಚಿತವಾಗಿ ನಿಶ್ಚಿತಗೊಳ್ಳದೆ ಇರುವ ಯುಗದಲ್ಲಿ, ಭೂ ವಿಜ್ಞಾನಿಗಳು ಕರೆಯುವ ತೃತೀಯ ಯುಗ ಎಂಬ ಭೂಮಿಯ ಚರಿತ್ರೆಯ ಕಾಲದಲ್ಲಿ, ಬಹುಶಃ ಆ ಯುಗದ ಕಡೆಯ ಅವಧಿಯಲ್ಲಿ, ಉಷ್ಣವಲಯದ ಕೆಲವು ಕಡೆಗಳಲ್ಲಿ ಅತ್ಯಂತ ಪರಿಷ್ಕಾರವಾಗಿ ವಿಕಾಸಗೊಂಡಿದ್ದ ನರ ಸದೃಶವಾದ ವಾನರ ಕುಲವೊಂದು ವಾಸಿಸುತ್ತಿದ್ದಿತು—ಬಹುಶಃ ಇವತ್ತು ಹಿಂದೂಸಾಗರದಲ್ಲಿ ಮುಳುಗಡೆಯಾಗಿರುವ ಮಹಾಖಂಡದಲ್ಲಿ ಇದ್ದಿರಬಹುದು. ನಮ್ಮ ಈ ಪೂರ್ವಜರ ಸರಿಸುಮಾರಾದ ವರ್ಣನೆಯನ್ನು ಡಾರ್ವಿನ್ ನಮಗೆ ಕೊಟ್ಟಿದ್ದಾರೆ. ಆ ಪೂರ್ವಜರು ಪೂರ್ತಿಯಾಗಿ ಕೂದಲಿಂದ ಮುಚ್ಚಲ್ಪಟ್ಟಿದ್ದರು. ಅವರಿಗೆ ಗಡ್ಡಗಳಿದ್ದವು, ಕಿವಿಗಳು ಚೂಪಾಗಿದ್ದವು. ಅವರು ಹಿಂಡುಗಟ್ಟಿಕೊಂಡು ಮರಗಳ ಮೇಲೆ ವಾಸಿಸುತ್ತಿದ್ದರು.

ಬಹುಶಃ ಅವರ ಜೀವನ ಕ್ರಮದ ಸದ್ಯಃ ಪರಿಣಾಮವಾಗಿ ಕೆಲ ಬದಲಾವಣೆಗಳಾದವು. ಮರ ಹತ್ತುವಾಗ ಕೈಗಳ ಪಾಲಿಗೆ ಒದಗುವ ಕಾರ್ಯವಿಧಾನಕ್ಕಿಂತ

ನೆಲದ ಮೇಲೆ ನಡೆಯುವಾಗ ಒದಗುವ ಕಾರ್ಯವಿಧಾನವು ವ್ಯತ್ಯಾಸವಷ್ಟೆ
ವಾನರ ಕುಲವು ನೆಲದ ಮೇಲೆ ನಡೆಯುವುದಕ್ಕೆ ಪ್ರಾರಂಭಿಸಿದಾಗ, ಕೈಗಳಿಗೆ
ಕಾರ್ಯಾಭ್ಯಾಸವನ್ನು ಮರೆತು ನೆಟ್ಟಗೆ ನಿಂತು ನಡೆಯುವುದನ್ನು ರೂಢಿಸಿ
ತೊಡಗಿದವು. **ವಾನರ ಕುಲದಿಂದ ಮಾನವ ಕುಲಕ್ಕಾಗಿರುವ ಪರಿವ**
**ಯಲ್ಲಿ ಇದು ಪರಿಣಾಮಕಾರಿಯಾದ ಹೆಜ್ಜೆಯಾಗಿತ್ತು.**

ಈಗಲೂ ಇರುವ ನರ ಸದೃಶವಾದ ವಾನರಗಳು ತಮ್ಮ ಎರಡು ಕಾಲ
ನೆಟ್ಟಗೆ ನಿಂತು ನಡೆಯಬಲ್ಲವು. ಆದರೆ ತ್ವರಿತದಲ್ಲಿದ್ದಾಗ ಮಾತ್ರ, ಮತ್ತು
ದಿಡ್ಡಿಯಾಗಿ ಈ ಕಾರ್ಯ ನಿರ್ವಹಿಸಬಲ್ಲವು. ಅವುಗಳ ಸ್ವಾಭಾವಿಕ ನಡೆಯು
ಬಗ್ಗಿದ್ದು ಕೈಗಳ ಬಳಕೆಯನ್ನು ಒಳಗೊಂಡಿರುತ್ತದೆ. ಅವುಗಳಲ್ಲಿ ಬಹು ಸ
ಯವು ಮುಷ್ಟಿಯ ಗಿಣ್ಣುಗಳನ್ನು ನೆಲದ ಮೇಲೆ ಊರಿ, ಕಾಲಗಲಿಸಿ, ತ
ಮೈಯನ್ನು ಉದ್ದವಾದ ಕೈಗಳ ನಡುವೆ ತೂಗಿಕೊಂಡು ಸಾಗುತ್ತವೆ, ಕುಂ
ಊರೆಗೋಲನ್ನು ಆನಿಸಿಕೊಂಡು ಚಲಿಸುವಂತೆ. ಒಟ್ಟನಲ್ಲಿ, ಇವತ್ತಿಗೂ ನ
ವಾನರಗಳ ನಡೆಯಲ್ಲಿ ನಾಗಾಲೋಟದಿಂದ ಹಿಡಿದು ಕಾಲೆಡರ ಮೇಲಣ ನ
ಯವರೆಗೆ ಎಲ್ಲ ಪರಿವರ್ತನೆಯ ಅವಸ್ಥೆಗಳನ್ನೂ ಕಾಣಬಹುದಾಗಿದೆ. ಆದರೆ
ಗಳಾವುವಕ್ಕೂ ನಡಿಗೆಯು ಸಮಯೋಪಾಯವಲ್ಲದೆ ಅದಕ್ಕಿಂತ ಹೆಚ್ಚಿನ
ಯಾಗಿಲ್ಲ.

ಕೂದಲು ಮುಚ್ಚಿದ್ದ ನಮ್ಮ ಪೂರ್ವಜರಿಗೆ ನೆಟ್ಟನೆಯ ನಡಿಗೆಯು ಮೊದ
ವಿಧಿಯಾಗಿ ತರುವಾಯ ಅಗತ್ಯವಾದುದಕ್ಕೆ ಈ ನಡುವಣ ಅವಧಿಯಲ್ಲಿ ಅವುಗಳ
ಬಳಕೆಗೆ ವಿವಿಧವಾದ ಹೊಸ ಕ್ರಿಯೆಗಳು ಒದಗಿ ಬಂದವು ಎಂಬುದನ್ನು ಪೂ
ಸೂಚಿತವಾಗಿ ಅಂಗೀಕರಿಸಬೇಕಾಗುತ್ತದೆ. ವಾನರಗಳಲ್ಲೂ ಕೂಡ ಕೈ ಕಾಲು
ಬಳಕೆಯಲ್ಲಿ ಕೆಲ ವ್ಯತ್ಯಾಸಗಳು ಈಗಾಗಲೆ ರೂಢಿಯಲ್ಲಿವೆ. ಈಗಾಗಲೆ ಹೇ
ವಂತೆ, ಮರ ಹತ್ತುವಾಗ ಕೈಗಳನ್ನು ಕಾಲುಗಳಿಗಿಂತ ಭಿನ್ನವಾದ ರೀತಿಯ
ಬಳಸಬೇಕಾಗುತ್ತದೆ. ಕೈಗಳು ಪ್ರಧಾನವಾಗಿ ಆಹಾರ ಗ್ರಹಣ ಸಂಗ್ರಹಣ
ಒದಗುತ್ತವೆ, ಸಸ್ತನಿ ಪ್ರಾಣಿವರ್ಗದ ಕೆಳ ಶ್ರೇಣಿಯಲ್ಲಿ ಪಂಜದ ಬಳಕೆಯು ಈ
ಗಲೆ ಇರುವುದನ್ನು ಇಲ್ಲಿ ಗಮನಿಸಬಹುದು. ಹಲವು ಮಂಗಗಳು ಮರಗಳ
ಗೂಡು ಕಟ್ಟಿಕೊಳ್ಳಲು ತಮ್ಮ ಕೈಗಳನ್ನು ಬಳಸುತ್ತವೆ. ಚಿಂಪಾಂಜಿಗಳಂತೂ ವ

ಗಾಳಿಗೆ ರಕ್ಷಣೆಯಾಗಿ ಕೊಂಬೆಗಳ ನಡುವೆ ಚಾವಣಿಯನ್ನೆ ಕಟ್ಟಿಕೊಳ್ಳಲು ಕೈಗಳನ್ನು ಬಳಸುತ್ತವೆ. ತಮ್ಮ ಕೈಗಳ ಸಹಾಯದಿಂದ ಅವು ಕೊರಡುಗಳನ್ನು ಹಿಡಿದೆತ್ತಿ ಶತ್ರುಗಳ ವಿರುದ್ಧ ಹೋರಾಡುತ್ತವೆ ಅಥವಾ ಶತ್ರುಗಳ ಮೇಲೆ ಹಣ್ಣುಗಳನ್ನೂ ಕಲ್ಲುಗಳನ್ನೂ ಎಸೆಯುತ್ತವೆ. ಬಂಧನದಲ್ಲಿರುವಾಗ, ಅವು ಮನುಷ್ಯರಿಂದ ಕಲಿತ ಹಲವಾರು ಸಣ್ಣ ಕಾರ್ಯಗಳನ್ನು ಮಾಡಲು ತಮ್ಮ ಕೈಗಳನ್ನು ಬಳಸುತ್ತವೆ. ಆದರೆ ಇಲ್ಲೆ ವ್ಯತ್ಯಾಸ ಕಂಡು ಬರುವುದು. ನರ ಸದೃಶವಾದ ಅತ್ಯಂತ ವಿಕಾಸಗೊಂಡು ಬೆಳವಣಿಕೆ ಪಡೆದ ವಾನರದ ಹದಗೊಳ್ಳದ ಕೈಗಳಿಗೂ ಲಕ್ಷಾಂತರ ವರ್ಷಗಳ ಕರ್ಮ ಕೌಶಲದಿಂದ ಅತ್ಯಂತ ಪರಿಷ್ಕಾರಗೊಂಡ ಮನುಷ್ಯನ ಕೈಗಳಿಗೂ ಇರುವ ದೊಡ್ಡ ಅಂತರವು ಸ್ಪಷ್ಟವಾಗಿ ವಿಶದಗೊಳ್ಳುತ್ತದೆ. ಎರಡು ಕೈಗಳಲ್ಲೂ ಸ್ನಾಯು ಮೂಳೆಗಳ ಸಂಖ್ಯೆ ಮತ್ತು ರಚನಾಕ್ರಮ ಒಂದೇ ಬಗೆಯದು. ಆದರೆ ನರಕುಲದ ಅತ್ಯಂತ ಕೀಳು ಕಿರಾತನ ಕೈಗಳು ಕೂಡ ಯಾವ ಮಂಗದ ಕೈಯೂ ಅನುಕರಿಸಲಾರದಂಥ ನೂರಾರು ಕ್ರಿಯೆಗಳನ್ನು ಮಾಡಬಲ್ಲದು. ಯಾವ ವಾನರ ಹಸ್ತವೂ ಅತ್ಯಂತ ಒಡ್ಡಾದ ಕಲ್ಲು ಚಾಕುವನ್ನೂ ಎಂದೂ ಕೂಡ ನಿರ್ಮಿಸಿಲ್ಲ.

ಪ್ರಥಮತಃ, ಆದಕಾರಣ, ನಮ್ಮ ಪೂರ್ವಜರು ವಾನರಾವಸ್ಥೆಯಿಂದ ನರಾವಸ್ಥೆಗೆ ಪರಿವರ್ತನೆಗೊಂಡ ಸಹಸ್ರಾರು ವರ್ಷಗಳ ಕಾಲದಲ್ಲಿ ತಮ್ಮ ಕೈ ಬಳಕೆಯಲ್ಲಿ ಕ್ರಮೇಣ ರೂಢಿ ಮಾಡಿಕೊಂಡ ನಾನಾ ಕ್ರಿಯೆಗಳು ಸರಳವಾಗಿಯೆ ಇದ್ದಿರಬೇಕು. ಅತ್ಯಂತ ಕೀಳು ವಿಕಾಸಾವಸ್ಥೆಯಲ್ಲಿರುವ ಕಿರಾತರು, ಯಾರಲ್ಲಿ ವಿಗತಿಯು ಪ್ರಾರಂಭವಾಗಿ ತಿರ್ಯಗ್ ಜಂತುಗಳ ಅವಸ್ಥೆಗೆ ಇಳಿಮುಖವಾಗಿದ್ದು ಅದೇ ಕಾಲದಲ್ಲಿ ಅವರ ಅಂಗ ವೈಕಲ್ಯವೂ ಉಂಟಾಗಿದೆಯೆಂದು ಭಾವಿಸಿಕೊಳ್ಳಬಹುದೋ, ಅಂಥವರು ಕೂಡ ಈ ಪರಿವರ್ತನಾವಸ್ಥೆಯ ಪ್ರಾಣಿಗಳಿಗಿಂತ ಎಷ್ಟೊ ಮೇಲು. ಮಾನವ ಹಸ್ತವು ಮೊದಲನೆಯ ಕಲ್ಲು ಚಾಕುವನ್ನು ನಿರ್ಮಿಸಿದುದಕ್ಕೆ ಮುಂಚೆ, ನಮಗೆ ಗೊತ್ತಾಗಿರುವ ಐತಿಹಾಸಿಕ ಕಾಲವು ಹೋಲಿಕೆಗೇ ಬಾರದಷ್ಟು ದೀರ್ಘಕಾಲಾವಧಿಯು ಕಳೆದಿರಬೇಕು. ಆದರೆ ನಿರ್ಣಾಯಕ ಹೆಜ್ಜೆಯನ್ನು ಇಡಲಾಯಿತು: **ಕೈ ಸ್ವತಂತ್ರವಾಗಿತ್ತು**. ಇನ್ನು ಮುಂದೆ ಹೆಚ್ಚು ಹೆಚ್ಚು ಚಾತುರ್ಯವನ್ನೂ ಕೌಶಲನ್ನೂ ದಕ್ಷತೆಯನ್ನೂ ಗಳಿಸಲು ಶಕ್ಯವಾಯಿತು. ಈ ರೀತಿ ಗಳಿಸಿದ ಅತಿಶಯವಾದ ಬಹುಮುಖ ಚಾತುರ್ಯವು ವಂಶಾನುಕ್ರಮವಾಗಿ ಸಂದು ತಲೆಮಾರುಗಳು ಕಳೆದಂತೆಲ್ಲ ಅಭಿವೃದ್ಧಿಗೊಂಡಿತು.

ಈ ರೀತಿ, ಕೈ ದುಡಿಮೆಯ ಸಾಧನವಷ್ಟೆ ಅಲ್ಲ, **ಅದು ದುಡಿಮೆ**
**ಉತ್ಪನ್ನವೂ ಹೌದು.** ದುಡಿಮೆಯಿಂದಲೆ, ಹೆಚ್ಚು ಹೊಸ ಕ್ರಿಯಾ ವಿಧಾ
ಗಳಿಗೆ ಅಳವಡಿಸಿಕೊಳ್ಳುವುದರಿಂದಲೆ, ಈ ರೀತಿ ರೂಢಿಸಿಕೊಂಡ ಸ್ನಾಯು, ರಜ
ಮತ್ತು, ದೀರ್ಘಾವಧಿಗಳ ತರುವಾಯ, ಮೂಳೆಗಳ ಬೆಳವಣಿಕೆಯನ್ನು ವಂಶಾ
ಕ್ರಮವಾಗಿ ಪಡೆದುಕೊಂಡಿರುವುದರಿಂದಲೆ, ಮತ್ತು ಈ ಆನುವಂಶಿಕವಾಗಿ ಪಡೆ
ಕೊಂಡ ನಯವನ್ನು ಹೊಸ ವಿವಿಧ ಸೂಕ್ಷ್ಮತರ ಕ್ರಿಯಾ ವಿಶೇಷಗಳಿಗೆ ಚಿರನೂತ
ವಾಗಿ ವಿನಿಯೋಗಿಸುತ್ತಿರುವುದರಿಂದಲೇನೆ ನರ ಹಸ್ತವು ಅತ್ಯುತ್ಕೃಷ್ಟವಾದ ಪರಿ
ತಿಯ ಅಂತಸ್ತನ್ನು ಐದಿದ್ದು ಒಬ್ಬ ರಾಫೇಲನ ಚಿತ್ರಗಳನ್ನೂ, ಒಬ್ಬ ಥೋರ್ವಾಲ
ಸನ್ನನ ಮೂರ್ತಿ ಶಿಲ್ಪವನ್ನೂ ಒಬ್ಬ ಪಗಾನಿನಿಯ ವಾದನವನ್ನೂ ಹೊರ ಹೊಮ್
ಸಲು ಸಾಮರ್ಥ್ಯವನ್ನು ಗಳಿಸಿಕೊಂಡಿದೆ.

ಆದರೆ ಕೈಯೊಂದೇ ಸ್ವತಃಏವ ಇರಲಿಲ್ಲ. ಅದು ಅತೀವ ಸಂಕೀರ್ಣವಾ
ಸಮಷ್ಟಿವ್ಯಕ್ತಿಯ ಒಂದು ಅಂಗಭಾಗಮಾತ್ರ. ಕೈಗೆ ಆದ ಪ್ರಯೋಜನವು ಇಡಿ
ದೇಹಕ್ಕೆ ಒದಗಿತ್ತು; ಇದು ಎರಡು ರೀತಿಯಲ್ಲಾಯಿತು.

ಮೊದಲಾದುದು, ಡಾರ್ವಿನ್ ಕರೆದಂತೆ, ಬೆಳವಣಿಕೆಯ ಪರಸ್ಪರ ಸಂಬ
ಧೀಕರಣದ ಪ್ರಕಾರ. ಈ ನಿಯಮದ ಪ್ರಕಾರ, ದೇಹಿಯ ಪ್ರತ್ಯೇಕ ಅಂಗಾಂ
ಗಳ ನಿರ್ದಿಷ್ಟ ಸ್ವರೂಪಗಳು ತಮ್ಮೊಡನೆ ಪ್ರತ್ಯಕ್ಷವಾಗಿ ಯಾವ ಸಂಬಂಧವನ್
ಪಡೆಯದೆ ಇತರ ಅಂಗಾಂಗಗಳ ನಿರ್ದಿಷ್ಟ ಸ್ವರೂಪಗಳಿಗೆ ಸರ್ವದಾ ಸಂಬಂಧ ಪ
ದಿರುತ್ತವೆ. ಹೇಗೆಂದರೆ, ಗುಂಬ ಕೇಂದ್ರವಿಲ್ಲದಂಥ ಕೆಂಪುರಕ್ತ ಕಣಗಳು
ಎಲ್ಲ ಪ್ರಾಣಿಗಳೂ, ಜತೆಗೆ, ಹಿಂದಲೆಯು ಬೆನ್ನು ಹುರಿಯ ಮೊದಲ ಮೂಳೆಯೊಡ
ಎರಡು ಮೂಳೆತಲೆಗಳಿಂದ ಜೋಡಣೆಯಾಗಿರುವ ಪ್ರಾಣಿಗಳೂ ಕೂಡ ಒಂದ
ವಿನಾಯಿತಿಯೂ ಇಲ್ಲದೆ ಮರಿಗಳಿಗೆ ಹಾಲುಣಿಸಲು ಸ್ತನ್ಯಗ್ರಂಥಿಗಳನ್ನು ಪಡೆದಿ
ತ್ರವೆ. ಅದೇ ರೀತಿ ಸಸ್ತನಿ ಪ್ರಾಣಿಗಳು ಸೀಳಿದ ಕಾಲ್ಗೊರಸುಳ್ಳವಾಗಿದ್ದರೆ, ಅಂ
ವಕ್ಕೆ ತಪ್ಪದೆ ಮೆಲುಕು ಹಾಕಲು ಎರಡು ಹೊಟ್ಟೆಗಳಿರುತ್ತವೆ. ದೇಹದ ಕೆಲ
ಅಂಗಭಾಗಗಳ ರೂಪದಲ್ಲಿ ಆಗುವ ಬದಲಾವಣೆಗಳು ಇತರ ಅಂಗಾಂಗಗಳ ರೂ
ದಲ್ಲೂ ಮಾರ್ಪಾಡನ್ನುಂಟು ಮಾಡುತ್ತವೆ; ಇದಕ್ಕೆ ಸಂಬಂಧವನ್ನು ಕಲ್ಪಿಸಿ ವಿವ
ಸಲು ನಮಗಿನ್ನೂ ಸಾಧ್ಯವಾಗಿಲ್ಲ, ಅಷ್ಟೆ. ನೀಲಿಗಣ್ಣಿನ ಬಿಳಿ ಬೆಕ್ಕುಗಳು

ಸರ್ವಥಾ ಬಿಳಿ ಬೆಕ್ಕುಗಳು, ಯಾವಾಗಲೂ ಕಿವುಡಾಗಿರುತ್ತವೆ. ಕ್ರಮೇಣ ಪರಿಷ್ಕಾರಗೊಂಡ, ನರಹಸ್ತವೂ ಅದಕ್ಕೆ ಅನುಗುಣವಾಗಿ ನೆಟ್ಟ ನಡಿಗೆಗೆ ಅಳವಟ್ಟು ಕೊಂಡ ಕಾಲುಗಳೂ, ನಿಸ್ಸಂಶಯವಾಗಿ, ಈ ಪರಸ್ಪರ ಸಂಬಂಧೀಕರಣದ ದೆಸೆಯಿಂದಾಗಿ, ದೇಹದ ಇತರ ಅಂಗಾಂಗಗಳ ಮೇಲೂ ಪ್ರತಿಕ್ರಿಯೆಯನ್ನುಂಟು ಮಾಡಿವೆ. ಆದಾಗ್ಯೂ, ಸಂಬಂಧವನ್ನು ಈವರೆಗೆ ಪರಿಶೋಧನೆ ಮಾಡಿರುವುದು ತೀರ ಯಃಕಶ್ಚಿತ್ ಪ್ರಮಾಣದ್ದಾಗಿರುವುದರಿಂದ ಒಟ್ಟಾರೆಯಾಗಿ ಈ ಸಂಗತಿಯನ್ನು ನಿರ್ದೇಶಿಸುವುದು ಮಾತ್ರ ನಮಗೆ ಸಾಧ್ಯವಾಗಿದೆ.

ಇದಕ್ಕಿಂತ ಮುಖ್ಯವಾದ ಸಂಗತಿಯೆಂದರೆ, ಇತರ ಅಂಗಾಂಗಗಳ ಮೇಲೆ ಹಸ್ತದ ಬೆಳವಣಿಕೆಯು ಮಾಡಿರುವ ಪ್ರತ್ಯಕ್ಷವೂ ನಿರ್ಣಯಶಕ್ಯವೂ ಆದ ಪ್ರತಿಕ್ರಿಯೆ. ಹಿಂದೆ ಹೇಳಿದಂತೆ, ನಮ್ಮ ವಾನರ ಪೂರ್ವಜರು ಹಿಂಡಿನೊಂದಿಗರು. ಪ್ರಾಣಿಗಳಲ್ಲೆಲ್ಲ ಅತ್ಯಂತ ಸಂಘಜೀವಿಯಾದ ಇಂಥ ಮಾನವ ಕುಲದ ಅವತರಣವನ್ನು ಸಂಘವಾಸಿಗಳಲ್ಲದ ಸದಃ ಪೂರ್ವಜ ಮೂಲದಿಂದ ಪಡೆಯಲು ಯತ್ನಿಸುವುದು ಕಂಡಂತೆ ಅಸಾಧ್ಯವಾಗಿರಬಹುದು. ನಿಸರ್ಗದ ಮೇಲೆ ಮನುಷ್ಯನ ಸ್ವಾಧೀನಾಧಿಕಾರವು ಕೈಯಿನ ಬೆಳವಣಿಕೆಯಿಂದ, ದುಡಿಮೆಯಿಂದ ಪ್ರಾರಂಭವಾಗಿ ಪ್ರತಿ ಹೊಸ ಮುನ್ನಡೆಯೊಡನೆಯೂ ಮಾನವ ದಿಗಂತವನ್ನು ವಿಸ್ತರಿಸಿತು. ಮನುಷ್ಯನು ನಿರಂತರವಾಗಿ ಪ್ರಕೃತಿಯ ವಸ್ತುಗಳ ಹೊಸ ಹೊಸ, ಅಲ್ಲಿಯವರೆಗೆ ಅಜ್ಞಾತವಾಗಿದ್ದ, ಗುಣ ಲಕ್ಷಣಗಳನ್ನು ಕಂಡುಹಿಡಿಯುತ್ತಿದ್ದ. ಇನ್ನೊಂದು ಕಡೆ, ದುಡಿಮೆಯ ಅಭಿವೃದ್ಧಿಯು ಪರಸ್ಪರಾವಲಂಬನದ ಪ್ರಮೇಯಗಳನ್ನು ಹೆಚ್ಚು ಹೆಚ್ಚಾಗಿ ಒದಗಿಸುವ ಮೂಲಕವೂ ಒಂಟಿ ಪ್ರಯತ್ನಕ್ಕಿಂತ ಒಟ್ಟಿನ ಪ್ರಯತ್ನದಲ್ಲಿದ್ದ ಹೆಚ್ಚಿನ ಪ್ರಯೋಜನವನ್ನು ಸ್ಪಷ್ಟ ಪಡಿಸಿಕೊಡುವ ಮೂಲಕವೂ ಮನುಷ್ಯ ಸಂಘವನ್ನು ಕಟ್ಟತೊಡಗಿತು. ಸಂಕ್ಷೇಪವಾಗಿ ಹೇಳುವುದಾದರೆ, ಮೂಡುತ್ತಿದ್ದ ಮಾನವರು **ಅನ್ಯೋನ್ಯವಾಗಿ ಮಾತನಾಡಿ ಕೊಳ್ಳಬೇಕಾದ** ಘಟ್ಟವನ್ನು ಮುಟ್ಟಿದರು. ಈ ಅಗತ್ಯ, ಈ ಒತ್ತಾಯ ತನ್ನ ಅಂಗವನ್ನು ಸೃಷ್ಟಿಸಿಕೊಂಡಿತು. ಅರೆ ಬೆಳೆದಿದ್ದ ವಾನರಕಂಠವು ಸಾವಧಾನವಾಗಿಯೂ ನಿಶ್ಚಿತವಾಗಿಯೂ ಮಾರ್ಪಾಡುಹೊಂದಿತು ; ಶ್ರುತಿ ಬದಲಾವಣೆಯಿಂದ ಸಂತತವಾಗ ಸ್ವರ ಬದಲಾವಣೆಯೂ ಶ್ರುತಿ ಸೂಕ್ಷ್ಮಗಳ ಮಾರ್ಪಾಡೂ ಸಾಧ್ಯವಾಯಿತು. ಕ್ರಮೇಣ ಬಾಯ ಅಂಗಗಳು ಒಂದಕ್ಷರದ ತರುವಾಯ ಮತ್ತೊಂದಕ್ಷರವನ್ನು ಉಚ್ಚಾರ ಮಾಡಲು ಕಲಿತವು.

ಪ್ರಾಣಿಗಳೊಡನೆ ಹೋಲಿಸಿ ನೋಡಿದರೆ, ದುಡಿಮೆಯಿಂದ ದುಡಿಮೆಯೊಡನೆ ಭಾಷೆಯು ಹುಟ್ಟಿತು ಎಂಬ ಈ ವಿವರಣೆಯೊಂದೇ ಸರಿಯಾದುದೆಂದು ಪ್ರಮಾಣಗೊಳ್ಳುತ್ತದೆ. ಅತ್ಯುನ್ನತ ಪ್ರಗತಿಯನ್ನು ಪಡೆದಿರುವ ಈ ಪ್ರಾಣಿಗಳು ಪರಸ್ಪರ ತಿಳಿಸಬೇಕಾದುದನ್ನು ಭಾಷೋಚ್ಚಾರದ ನೆರವಿಲ್ಲದೆಯೆ ತಿಳಿಸಬಲ್ಲವು. ಪ್ರಾಕೃತಾವಸ್ಥೆಯಲ್ಲಿ ಯಾವ ಪ್ರಾಣಿಯೂ ಮಾನವ ಭಾಷೆಯನ್ನು ಅರ್ಥಮಾಡಿಕೊಳ್ಳಲಾಗಲಿ ಆಡಲಾಗಲಿ ತನಗಿರುವ ಅಸಹಾಯತೆಯಿಂದ ತೊಂದರೆ ಪಡುವುದಿಲ್ಲ. ಆದರೆ ಮನುಷ್ಯನು ಅದನ್ನು ಪಳಗಿಸಿದ ಮೇಲೆ ಪರಿಸ್ಥಿತಿ ಬೇರೆಯಾಗುತ್ತದೆ. ಮನುಷ್ಯನ ಸಹವಾಸದಿಂದ ನಾಯಿಯೂ ಕುದುರೆಯೂ ತಮ್ಮ ಗ್ರಹಣ ಶಕ್ತಿಗೆ ಸೇರಿದ ಯಾವುದೇ ವಿಚಾರವನ್ನಾಗಲಿ ಸುಲಭವಾಗಿ ಅರ್ಥ ಮಾಡಿಕೊಳ್ಳಬಲ್ಲ ಮಟ್ಟಿಗೆ ಉಚ್ಚಾರ ಭಾಷೆಯನ್ನು ಗ್ರಹಿಸಿಕೊಳ್ಳಲನುವಾದಂತೆ ತಮ್ಮ ಶ್ರವಣೇಂದ್ರಿಯಗಳನ್ನು ಬೆಳಸಿಕೊಂಡಿವೆ. ಅಲ್ಲದೆ, ತಮಗೆ ಮೊದಲು ಸರ್ವಥಾ ಪರಕೀಯವಾಗಿದ್ದಂಥ, ಮನುಷ್ಯನ ಬಗ್ಗೆ ಅಭಿಮಾನ, ಕೃತಜ್ಞತೆ ಮುಂತಾದ ರಾಗಭಾವಗಳನ್ನು ಅನುಭವಿಸುವ ಸಾಮರ್ಥ್ಯ ಸಂಪಾದಿಸಿಕೊಂಡಿವೆ. ಪ್ರಾಣಿಗಳ ಪರಿಚಯ ಇರುವವರಿಗೆಲ್ಲ, ಈ ಪ್ರಾಣಿಗಳಲ್ಲಿ ಹಲವು ಭಾಷೋಚ್ಚಾರಣೆ ಮಾಡಲು ತಮಗೆ ಅಶಕ್ಯವಾಗಿರುವುದು ಒಂದು ಕೊರತೆಯೆಂದೂ ದುರದೃಷ್ಟವಶಾತ್ ತಮ್ಮ ವಾಕ್ ಅಂಗಗಳು ಈಗಾಗಲೆ ವಿಚಿತ್ರವಾಗಿ ಒಂದು ನಿರ್ದಿಷ್ಟವಾದ ರೀತಿಯಲ್ಲಿ ವಿಶಿಷ್ಟವಾದ ಬೆಳವಣಿಗೆಯನ್ನು ಪಡೆದಿರುವ ಕಾರಣ ತಿದ್ದಲು ಸಾಧ್ಯವಿಲ್ಲವೆಂದೂ ಅನುಮಾನವಿಲ್ಲದೆ ಮರುಗುವ ಪ್ರಸಂಗಗಳನ್ನು ಗಮನಿಸಿರಬೇಕು. ಆದರೆ ಈ ಕೊರತೆಯು, ಅಂಗ ಮೂಲಗಳಿರುವ ಪ್ರಾಣಿಗಳಲ್ಲಿ, ಕೆಲ ಮಿತಿಗಳಿಗೊಳಪಟ್ಟು ನಿವಾರಣೆಯಾಗಿರುತ್ತವೆ. ಹಕ್ಕಿಗಳ ಗಲ್ಲದ ಅಂಗಗಳು ಮನುಷ್ಯನವಕ್ಕಿಂತ ಸಾಧ್ಯವಿರುವಷ್ಟು ಭಿನ್ನವಾಗಿವೆ, ಆದರೆ ಪ್ರಾಣಿವರ್ಗದಲ್ಲೆಲ್ಲ ಹಕ್ಕಿಗಳೊಂದೇ ಮಾತನ್ನು ಕಲಿಯಬಲ್ಲವು. ಮತ್ತು ಅತ್ಯಂತ ಕರ್ಕಶ ಧ್ವನಿಯುಳ್ಳ ಗಿಣಿಯೇ ಎಲ್ಲ ಹಕ್ಕಿಗಳಿಗಿಂತ ಉತ್ಕೃಷ್ಟವಾಗಿ ಮಾತನಾಡತಕ್ಕುದಾಗಿದೆ. ಗಿಣಿಗೆ ತಾನಾಡುವ ಮಾತು ಅರ್ಥವಾಗುವುದಿಲ್ಲ ಎಂದು ಆಕ್ಷೇಪ ಹೇಳದಿರಲಿ. ಮನುಷ್ಯನೊಡಗೂಡಿ ಮಾತನಾಡುವ ಸಂತೋಷಕ್ಕಾಗಿ ಗಿಣಿಯು ಗಂಟೆಗಟ್ಟಲೆ ಹರಟುತ್ತ ತನ್ನ ವಾಗ್ ಭಂಡಾರವನ್ನೆಲ್ಲ ಬರಿದು ಮಾಡಿಬಿಡುತ್ತದೆಂಬುದೇನೊ ನಿಜವೆ. ಆದರೆ ತನ್ನ ಪ್ರಜ್ಞಾ ಮಿತಿಗೆ ಸೇರಿದಷ್ಟು ಮಟ್ಟಿಗಾದರೂ ಅದಕ್ಕೆ ತಾನಾಡುವ ಮಾತುಗಳು ಅರ್ಥವಾಗುತ್ತವೆ. ಗಿಣಿಗೆ ಪೈಗಳ

ಮಾತನ್ನು ಅವುಗಳ ಅರ್ಥವು ಅದಕ್ಕಾಗುವ ರೀತಿಯಲ್ಲಿ ಕಲಿಸಿ ಬೇಕಾದರೆ ನೋಡಿ (ಉಷ್ಣವಲಯದಿಂದ ಹಿಂದಿರುಗುವ ನಾವಿಕರಿಗೆ ಇದು ಬಹಳ ಕುಚೋದ್ಯದ ಹವ್ಯಾಸವಾಗಿದೆ); ಅದನ್ನೇನಾದರೂ ನೀವು ಕೆಣಕಿದಿರೊ, ಆಗ ತೆಗೆದುಕೊಳ್ಳಿ, ಬರ್ಲಿನ್ ತರಕಾರಿ ವ್ಯಾಪಾರಿಯಷ್ಟೆ ಸಂದರ್ಭೋಚಿತವಾಗಿ ಬೈಗಳ ಮಾತನ್ನು ಅದು ಬಳಸಬಲ್ಲದು ಎಂಬುದನ್ನು ನೀವು ಕಲಿಯುತ್ತೀರಿ. ತಿಂಡಿಯ ತುಣುಕುಗಳನ್ನು ಯಾಚಿಸುವ ಬಾಬಿನಲ್ಲೂ ಅಷ್ಟೆ.

ಮೊದಲು ದುಡಿಮೆ, ತರುವಾಯ ಅದರೊಡನೆ ಭಾಷೆ—ಈ ಎರಡು ಮುಖ್ಯ ಮೂಲ ಪ್ರೇರಕಾಂಶಗಳ ಪ್ರಭಾವದಲ್ಲಿ ವಾನರದ ಮಿದುಳು ನರನ ಮಿದಿಳಾಗಿ ಕ್ರಮೇಣ ಬದಲಾವಣೆಯಾಯಿತು; ಇವೆರಡು ಮಿದಿಳುಗಳೂ ಒಂದೇ ಹೋಲಿಕೆಯುಳ್ಳವಾದರೂ ನರನ ಮಿದುಳು ತುಂಬಾ ಹೆಚ್ಚು ಗಾತ್ರವುಳ್ಳದ್ದು. ಹೆಚ್ಚಿನ ಪರಿಷ್ಕಾರವನ್ನು ಪಡೆದದ್ದು. ಮಿದಿಳಿನ ಬೆಳವಣಿಗೆಯೊಡನೆ ಅದರ ಸದ್ಯಃ ಸಾಧನಗಳಾದ ಇಂದ್ರಿಯಾಂಗಗಳ ಬೆಳವಣಿಗೆಯೂ ಸಾಗಿತು. ವಾಗಿಂದ್ರಿಯದ ಕ್ರಮಪ್ರಾಪ್ತವಾದ ಬೆಳವಣಿಕೆಯು ಅವಶ್ಯವಾಗಿ ಶ್ರವಣೇಂದ್ರಿಯದ ಬೆಳವಣಿಕೆಯೊಡಗೂಡಿ ನಡೆಯಬೇಕಾಗಿರುವಂತೆ, ಇಡೀ ಮಿದಿಳಿನ ಬೆಳವಣಿಕೆಯೂ ಸರ್ವ ಇಂದ್ರಿಯಗಳ ಪರಿಷ್ಕಾರವನ್ನು ಅನುಸರಿಸಿತು. ಹದ್ದಿನ ಕಣ್ಣು ಮನುಷ್ಯನ ಕಣ್ಣಿಗಿಂತ ಬಹಳ ದೂರವನ್ನು ಕಾಣುತ್ತದೆ, ಆದರೆ ಹದ್ದಿನ ಕಣ್ಣು ಕಾಣುವುದಕ್ಕಿಂತ ಅತಿಶಯವಾದಷ್ಟನ್ನು ಕಣ್ಣೆದುರಿನ ವಸ್ತುಗಳಲ್ಲೇ ಮನುಷ್ಯನ ಕಣ್ಣು ಕಾಣುತ್ತದೆ. ನಾಯಿಗೆ ಮನುಷ್ಯನಿಗಿಂತ ಅತ್ಯಂತ ತೀಕ್ಷ್ಣವಾಗಿ ವಾಸನೆ ಹಿಡಿಯುವ ಶಕ್ತಿ ಇದೆ, ಆದರೆ ಯಾವ ವಾಸನೆಯು ಯಾವ ವಸ್ತು ಸಂಕೇತವೆಂಬುದನ್ನು ಮನುಷ್ಯ ನಿರ್ದಿಷ್ಟವಾಗಿ ತಿಳಿದುಕೊಳ್ಳುವುದರಲ್ಲಿ ನೂರನೇ ಒಂದು ಭಾಗವನ್ನೂ ಅದು ಗುರುತಿಸಲಾರದು. ವಾನರವು ಅತ್ಯಂತ ಒರಟಾದ ಪ್ರಾರಂಭ ದೆಸೆಯಲ್ಲಿ ಪಡೆದುಕೊಂಡಿರುವ ಸ್ಪರ್ಶೇಂದ್ರಿಯು ಮನುಷ್ಯನಲ್ಲಿ ದುಡಿಮೆಯ ಮುಖೇನ ಕೈಯಿನ ಬೆಳವಣಿಕೆಯೊಡಗೂಡಿಕೊಂಡೇ ನಡೆದಿದೆ.

ಮಿದಿಳು ಮತ್ತು ಅದರ ಸಹಚಾರಿ ಇಂದ್ರಿಯಗಳ ಬೆಳವಣಿಗೆಯೂ, ಪ್ರಜ್ಞಾಶಕ್ತಿಯಲ್ಲಿ ಊರ್ಜಿತಗೊಂಡ ಸ್ವಚ್ಛತೆಯೂ, ಯುಕ್ತಾಯುಕ್ತ ಪರಿಜ್ಞಾನ ಮತ್ತು ಭಾವಗ್ರಹಣ ಶಕ್ತಿಯೂ ಕೂಡ ದುಡಿಮೆ ಭಾಷೆಗಳ ಮೇಲೆ ಉಂಟುಮಾಡಿದ ಪ್ರತಿಕ್ರಿಯೆಯು ದುಡಿಮೆಗೂ ಹೆಚ್ಚಿನ ಬೆಳವಣಿಗೆಗೆ ಚಿರವಿನೂತನವಾದ

ಉತ್ತೇಜನವನ್ನು ಕೊಟ್ಟಿತು: ಈ ಬೆಳವಣಿಗೆಯು ಮನುಷ್ಯನು ಮಂಗಾವಸ್ಥೆಯಿಂದ ಸ್ಪಷ್ಟವಾಗಿ ವಿಭಿನ್ನಗೊಂಡಾಗ ಮುಕ್ತಾಯವಾಗುವ ಬದಲು ಒಟ್ಟಾರೆಯಲ್ಲಿ ಪ್ರಬಲವಾದ ಪುರೋಭಿವೃದ್ಧಿಯನ್ನು ಹೊಂದುತ್ತ, ವಿಭಿನ್ನ ಜನರಾಶಿಗಳಲ್ಲಿ ದೆಸೆದರ್ಜೆಗಳ ತಾರತಮ್ಯಗೊಂಡು ಅಲ್ಲಲ್ಲಿ ಆಗಾಗ್ಗೆ ಸ್ಥಳೀಯವಾಗಿ ಅಥವಾ ತಾತ್ಕಾಲಿಕವಾಗಿ ಇಳಿಮುಖವಾಗುತ್ತ ಪ್ರಗತಿಭಂಗಗೊಂಡರೂ ಸಾಗುತ್ತಿದೆ. ಈ ಪುರೋಭಿವೃದ್ಧಿಯು ಸರ್ವಾಂಗ ಪರಿಪೂರ್ಣನಾದ ಮನುಷ್ಯನ ಅವತರಣದೊಡನೆ ಕಾರ್ಯಾಚರಣೆಗೆ ಬಂದ ಹೊಸ ಅಂಶವಾದ ಸಮಾಜದಿಂದ ಒಂದು ಕಡೆ ಬಲವತ್ತರವಾಗಿ ಪ್ರೇರಪಿಸಲ್ಪಟ್ಟು ಮತ್ತೊಂದು ಕಡೆ ನಿರ್ದಿಷ್ಟ ದೆಸೆಗಳಲ್ಲಿ ನಡೆಸಲ್ಪಟ್ಟಿತು.

ಮರಹತ್ತುವ ಕಪಿಗಳ ಹಿಂಡಿನಿಂದ ಮಾನವ ಸಮಾಜವು ಉದಯಿಸುವುದಕ್ಕೆ ಮುಂಚೆ ಲಕ್ಷಾಂತರ ವರ್ಷಗಳು ನಿಸ್ಸಂಶಯವಾಗಿ ಉರುಳಿವೆ—ಆ ದೀರ್ಘಾವಧಿಯು ಮನುಷ್ಯನ ಬದುಕಿನಲ್ಲಿ ಒಂದು ಸೆಕೆಂಡು ಎಷ್ಟಾಗುತ್ತದೆಯೋ ಭೂಮಿಯ ಚರಿತ್ರೆಯಲ್ಲಿ ಅಷ್ಟೆ ಗಣನೆಯುಳ್ಳದ್ದು. *ಕಡೆಗೂ ಮಾನವ ಸಮಾಜವು ಭೂಮಿಯ ಮೇಲೆ ಮೂಡಿತು. ಮತ್ತೆ ಕಪಿಗಳ ಹಿಂಡಿಗೂ ಮಾನವ ಸಮಾಜಕ್ಕೂ ವೈಶಿಷ್ಟ್ಯಪೂರ್ಣವಾದ ಯಾವ ವ್ಯತ್ಯಾಸವನ್ನು ನಾವು ಕಾಣುತ್ತೇವೆ? ದುಡಿಮೆ. ವಾನರಯೂಥಕ್ಕೆ ಭೌಗೋಳಿಕ ಸನ್ನಿವೇಶಗಳೋ ಅಥವಾ ನೆರೆಹೊರೆಯ ಗುಂಪುಗಳ ಪ್ರತಿಭಟನೆಯೋ ಗೊತ್ತುಪಡಿಸಿದ್ದ ಪ್ರದೇಶಗಳಲ್ಲಿ ಆಹಾರವನ್ನು ಗೋರಿಕೊಳ್ಳುದರಲ್ಲಿ ಸಂತೃಪ್ತಿಯುಂಟಾಗಿತ್ತು; ಅದು ಹೊಸ ಹೊಸ ಆಹಾರಮೂಲಗಳನ್ನು ಪಡೆದುಕೊಳ್ಳಲು ವಲಸೆಯೆತ್ತಿ ವ್ಯಾಜ್ಯ ಹೂಡುತ್ತಿದ್ದಿತೇ ವಿನಾ ಪ್ರಾಕೃತಾವಸ್ಥೆಯಲ್ಲಿ ದೊರೆತುದಕ್ಕಿಂತ ಹೆಚ್ಚಿಗೆ ಏನನ್ನೂ ಹೊರಪಡಿಸಿ ತೆಗೆಯಲು ಅಶಕ್ತವಾಗಿತ್ತು—ತನ್ನ ಮಲವಿಸರ್ಜನೆಯಿಂದ ಆ ಅರಿವಿಲ್ಲದೆಯೆ ನೆಲಕ್ಕೆ ಗೊಬ್ಬರವನ್ನು ಒದಗಿಸಿ ಫಲವತ್ತನ್ನಾಗಿ ಮಾಡಿದುದನ್ನು ವಿನಾಯಿಸಿದರೆ. ಎಲ್ಲ ಆಹಾರಮೂಲಗಳನ್ನೂ ಆಕ್ರಮಿಸಿಕೊಂಡ ತರುವಾಯ ಕಪಿ ಸಂಕುಲದ ಅಭಿವೃದ್ಧಿಯು ಸಾಗಲು ಸಾಧ್ಯವಿರಲಿಲ್ಲ; ಕಪಿಸಂಖ್ಯೆಯು ಉತ್ತಮ ಪಕ್ಷ ಇದ್ದಷ್ಟೆ ಇರಲು ಶಕ್ಯವಾಗಿತ್ತು. ಆದರೆ ಎಲ್ಲ ಪ್ರಾಣಿಗಳೂ

---

*ಈ ಬಾಬಿನಲ್ಲಿ ಪ್ರಮುಖ ಪ್ರಮಾಣ ವಚನರಾದ ಸರ್ ವಿಲಿಯಂ ಥಾಂಸನ್ ಅವರು, ಭೂಮಿಯು ತಂಪುಗೂಡಿದ ಮೇಲೆ ಆದರಲ್ಲಿ ಪ್ರಾಣಿಗಳೂ ಸಸ್ಯಗಳೂ ಬದುವುದಕ್ಕೆ ಹತ್ತು ಕೋಟಿ ವರ್ಷಗಳಿಗಿಂತ ಕೊಂಚ ಹೆಚ್ಚುಕಾಲ ಸಂದಿರಬೇಕೆಂದು ಅಂದಾಜು ಹಾಕಿದ್ದಾರೆ....... [ಟೀಕೆ ಎಂಗಲ್ಸ್]

ಆಹಾರವನ್ನು ಹೆಚ್ಚಾಗಿ ಪೋಲು ಮಾಡುತ್ತವೆ ಮತ್ತು ಮೊಳಕೆಯಲ್ಲಿಯೆ ಮುಂದಿನ ಸಾಲಿನ ಧಾನ್ಯಸರಪರಾಜನ್ನು ಧ್ವಂಸ ಮಾಡುತ್ತವೆ. ಬರುವ ವರ್ಷ ತನಗೆ ಮರಿಗಳನ್ನು ತಯಾರಿಸಿಕೊಡಲಿ ಎಂದು ಚಿಂತಿಸಿಕೊಂಡು ತೋಳವು ಹೆಣ್ಣು ಜಿಂಕೆಯನ್ನು ಕೊಲ್ಲದೆ, ಬೇಟೆಗಾರನಂತೆ, ಬಿಡುವುದಿಲ್ಲ. ಗ್ರೀಸಿನಲ್ಲಿ ಚಿಗುರು ಕುರುಚಲನ್ನೆಲ್ಲ ಮೇಯ್ದುಹಾಕುವ ಮೇಕೆಗಳು ಅಲ್ಲಿನ ಪರ್ವತಗಳನ್ನೆಲ್ಲ ಬೋಳಾಗುವಂತೆ ಎಲ್ಲ ಸಸ್ಯಗಳನ್ನೂ ಹೆರೆದುಕೊಂಡು ಮುಕ್ಕಿಬಿಟ್ಟವೆ. ಪ್ರಾಣಿಗಳ ಈ "ಕೊಳ್ಳೆ ಹೊಡೆದು ಬಾಳ ನಿರ್ವಹಿಸುವ ಬಗೆಯು" ಹೊಸ ಹೊಸ ಬಗೆಯ ಆಹಾರವಸ್ತುಗಳಿಗೆ ಅವು ಒಗ್ಗಿಕೊಳ್ಳುವಂತೆ ಬಲವತ್ತರವಾದ ಪರಿಸ್ಥಿತಿ ಏರ್ಪಡಿಸಿ, ಅವುಗಳ ವಂಶಪರಿವರ್ತನೆಯನ್ನು ಕ್ರಮಶಃ ನೆರವೇರಿಸುತ್ತದೆ. ಆಹಾರ ವ್ಯತ್ಯಾಸದಿಂದ ಅವುಗಳ ರಕ್ತದರಾಸಾಯನಿಕಸಂಯೋಜನೆಯು ವ್ಯತ್ಯಾಸಗೊಳ್ಳುತ್ತದೆ ಮತ್ತು ಇಡೀ ಅಂಗರಚನೆಯೆ ಬದಲಾಗುತ್ತದೆ. ಈ ರೀತಿ, ಸ್ತ್ರಿಮಿತಕ್ಕೆ ಬಿದ್ದ ವಂಶಗಳೇ ಅದೃಶ್ಯವಾಗುತ್ತವೆ. ಈ ಕೊಳ್ಳೆಬಾಳ ಬಗೆಯೆ ನಮ್ಮ ಪೂರ್ವಜರನ್ನು ವಾನರಕುಲದಿಂದ ಮಾನವ ಕುಲಕ್ಕೆ ಪರಿವರ್ತನಗೊಳಿಸಿತೆಂಬುದರಲ್ಲಿ ಸಂದೇಹವೇ ಇಲ್ಲ. ಆವರಣಕ್ಕೆ ಹೊಂದಿಕೊಳ್ಳುವುದರಲ್ಲೂ ಬುದ್ಧಿಶಕ್ತಿಯಲ್ಲೂ ಬಾಕಿ ಕಪಿಕುಲಗಳನ್ನೆಲ್ಲ ಸರ್ವಥಾ ಮೀರಿಸಿ ಬೆಳವಣಿಗೆಗೊಂಡಿದ್ದ ವಾನರ ಸಂಕುಲದಲ್ಲಿ ಈ ಕೊಳ್ಳೆಬಾಳ ಪರಿಣಾಮದಿಂದ ಆಹಾರ ಸಸ್ಯಗಳ ಸಂಖ್ಯಾಭಿವೃದ್ಧಿಯಾಗಿ ಜೀವಪೋಷಕ ಸಸ್ಯಗಳ ಭಕ್ಷ್ಯಯೋಗ್ಯವಾದ ಭಾಗಗಳ ಬಳಕೆಯ ಭುಂಜನವೂ ಹೆಚ್ಚದೆ ನಿರ್ವಾಹವೇ ಇರಲಿಲ್ಲ. ಸಂಕ್ಷೇಪವಾಗಿ ಹೇಳುವುದಾದರೆ, ಆಹಾರವು ಹೆಚ್ಚು ಹೆಚ್ಚು ವೈವಿಧ್ಯವನ್ನು ತಾಳಿತು; ಈ ರೀತಿ, ಮನುಷ್ಯನ ಪರಿವರ್ತನೆಗೆ ರಾಸಾಯನಿಕ ಆಧಾರಗಳನ್ನು ಒದಗಿಸುವ ಆಹಾರವಸ್ತುಗಳೂ ಬಹುಳವಾದವು. ಆದರೆ ಇದೆಲ್ಲವೂ ಕೂಡ, ನಿಷ್ಕೃಷ್ಟಾರ್ಥದಲ್ಲಿ, ದುಡಿಮೆ ಆಗಿರಲಿಲ್ಲ.

ದುಡಿಮೆಯು ಸಾಧನೋಪಕರಣಗಳ ತಯಾರಿಕೆಯೊಡನೆ ಪ್ರಾರಂಭವಾಗುತ್ತದೆ. ಆದರೆ ನಮಗೆ ಸಿಕ್ಕಿರುವ ಅತ್ಯಂತ ಪ್ರಾಚೀನವಾದ ಸಾಧನ ವಸ್ತುಗಳಾದರೂ ಯಾವುವು—ಕಂಡು ಹಿಡಿಯಲ್ಪಟ್ಟಿರುವ ಇತಿಹಾಸಪೂರ್ವ ಮಾನವರ ಆನುವಂಶಿಕ ಆಸ್ತಿ ವಸ್ತುಗಳ ಅಪೇಕ್ಷ್ಯವೂ ಮತ್ತು ಇತಿಹಾಸ ಕಾಲದ ಅತ್ಯಂತ ಪೂರ್ವಮಾನವರ ಜೀವನ ಕ್ರಮದಿಂದಲೂ ಮತ್ತು ಇವತ್ತಿನ ಬಹಳ ಒರಟರಾದ ಕಿರಾತ ಕುಲದ ಜೀವನ ಕ್ರಮದಿಂದಲೂ ಪ್ರಾಚೀನವೆಂದು ಇತ್ಯರ್ಥಗೊಳಿಸಲ್ಪಟ್ಟಿರುವುವು. ಅವೆಲ್ಲ

ಬೇಟೆಯ ಮತ್ತು ಬೆಸ್ತರ ಉಪಕರಣಗಳು, ಬೇಟೆಯ ಉಪಕರಣಗಳು ಆಯು
ಗಳಾಗಿಯೂ ಉಪಯುಕ್ತವಾಗುತ್ತಿದ್ದವು. ಆದರೆ ಬೇಟೆಯೂ ಮೀನುಗಾ
ಕೆಯೂ ಕೂಡ, ಸಂಪೂರ್ಣ ಸಸ್ಯಾಹಾರದ ಜತೆಗೆ ಮಾಂಸಾಹಾರವೂ ಬಳಕೆ
ಬಂದುದನ್ನು ಸೂಚಿಸುತ್ತವೆ. ವಾನರಾವಸ್ಥೆಯಿಂದ ನರಾವಸ್ಥೆಗಾಗಿರುವ ಪ
ವರ್ತನೆಯಲ್ಲಿ ಇದು ಬಹಳ ಮುಖ್ಯವಾದ ಘಟ್ಟ. ಸಿದ್ಧಾವಸ್ಥೆಯಲ್ಲಿ ದೊರಕು
ಮಾಂಸಾಹಾರದಲ್ಲಿ ಶರೀರದ ರಾಸಾಯನಿಕ ಪರಿವರ್ತನೆಗೆ ಬೇಕಾದ ಎಲ್ಲ ಅಗತ್ಯ
ವಾದ ಮೂಲ ಸಾಮಾಗ್ರಿಗಳೂ ಇರುತ್ತವೆ. ಮಾಂಸಾಹಾರವು ಜೀರ್ಣ ಕಾರ್ಯಕ್ಕೆ
ಬೇಕಾದ ಕಾಲವನ್ನು ಕಡಿಮೆ ಮಾಡಿದ್ದಷ್ಟೇ ಅಲ್ಲದೆ, ಸಸ್ಯಗಳ ಜೀವಿತದಲ್ಲಿ ನಡೆ
ಯುವ ಸಾವಧಾನವಾದ ಪ್ರಕ್ರಿಯೆಗಳಿಗೆ ಹೋಲುವ ಸಸ್ಯ ಪ್ರಾಯವಾದ ದೈಹಿ
ಬೆಳವಣಿಗೆಯ ಕಾಲವನ್ನು ಕೂಡ ಕಡಿಮೆ ಮಾಡುತ್ತದೆ. ಈ ರೀತಿ, ಉಚಿತವೆನಿಸಿ
ಬಗ್ಗೆಯಲ್ಲಿ ತಮ್ಮ ಜೀವನವನ್ನು ಸಹಜದಿಂದ ನಡೆಸಲು ಕಾಲ, ವಸ್ತು ಮತ್ತು
ಅಪೇಕ್ಷೆಗಳನ್ನು ನರನಿಗೆ ಒದಗಿಸಿಕೊಟ್ಟಿದೆ. ಅಲ್ಲದೆ ವಿಕಾಸಗೊಳ್ಳುತ್ತಿದ್ದ ಮಾನವನು
ಸಸ್ಯದಿಂದ ದೂರ ಸರಿದಷ್ಟು, ಮೃಗಾವಸ್ಥೆಯಿಂದ ಮೇಲೇರ ತೊಡಗಿದ. ಸಸ್ಯಾಹಾರ
ದೊಡನೆ ಮಾಂಸಾಹಾರಕ್ಕೆ ಒಗ್ಗಿಕೊಳ್ಳುವುದರಿಂದ ಕಾಡ ಬೆಕ್ಕುಗಳೂ ಕಾಡ
ನಾಯಿಗಳೂ ಮಾನವನ ಸೇವೆಗೆ ಯೋಗ್ಯವಾಗುವಷ್ಟು ಪರಿವರ್ತನೆಯನ್ನು ಪಡೆ
ದಂತೆ, ಸಸ್ಯಾಹಾರದೊಡನೆ ಮಾಂಸಾಹಾರವನ್ನು ಒಗ್ಗಿಸಿಕೊಂಡು ಮನುಷ್ಯನು ನರಾ
ವಸ್ಥೆಯನ್ನು ಐದುವುದರಲ್ಲಿ ದೈಹಿಕ ಶಕ್ತಿ ಸಾಮರ್ಥ್ಯಗಳನ್ನು ಗಳಿಸಿಕೊಂಡ ಅತಿ
ಮುಖ್ಯವಾದ ಪರಿಣಾಮವುಂಟಾದುದು ಮಿದುಳಿನ ಮೇಲೆ. ಮಾಂಸಾಹಾರದಿಂದ
ಮಿದುಳಿನ ಪುಷ್ಟಿ ಅಭಿವೃದ್ಧಿಗಳಿಗೆ ಅಗತ್ಯವಾದ ವಸ್ತುಗಳ ಯಥೇಷ್ಟ ಸರಬರಾಜು
ಏರ್ಪಟ್ಟ ಕಾರಣ, ಮಿದುಳು ಮುಂಚೆಗಿಂತ ಹೆಚ್ಚು ಶೀಘ್ರವಾಗಿಯೂ ಪರಿಷ್ಕಾರ
ವಾಗಿಯೂ ತಲೆ ಮಾರಿನಿಂದ ತಲೆ ಮಾರಿಗೆ ಅಭಿವೃದ್ಧಿಯನ್ನು ಪಡೆಯಲು ಶಕ್ಯವಾ
ಯಿತು. ಸಸ್ಯಾಹಾರಿಗಳಿಗೆಷ್ಟೇ ಗೌರವ ಸೂಚಿಸಿದರೂ ಕೂಡ, ಮನುಷ್ಯಾವ
ತಾರವು ಮಾಂಸಾಹಾರವಿಲ್ಲದೆ ನೆರವೇರಲಿಲ್ಲ ಎಂಬುದನ್ನು ಗಣನೆಗೆ ತಂದುಕೊಳ್ಳಲೇ
ಬೇಕು. ಇದರ ಪರಿಣಾಮವಾಗಿ, ಎಲ್ಲ ಮಾನವ ಕುಲಗಳಲ್ಲೂ ನರಭಕ್ಷಣೆಗೆ
ಒಂದಲ್ಲೊಂದು ಸಲ ಎಡೆಯುಂಟಾಗಿದ್ದರೆ. (ಉದಾಹರಣೆಗೆ ಕ್ರಿಸ್ತ್ ಪಾರರ ಪೂರ್ವ
ಜರೇ ಮುಂತಾದ ಐರೋಪ್ಯ ಕುಲದವರು ಹತ್ತನೆ ಶತಮಾನದಷ್ಟು ಇತ್ತೀಚಿನ
ತನಕ ತಮ್ಮ ತಾಯಿ ತಂದೆಗಳನ್ನು ತಿಂದುಕೊಳ್ಳುತ್ತಿದ್ದರು) ಆದರಿಂದ ಇವತ್ತು
ನಮಗೇನೂ ಪ್ರಭಾವವುಂಟಾಗಿಲ್ಲ.

ಮಾಂಸಾಹಾರವು ನಿರ್ಣಾಯಕ ಪ್ರಾಮುಖ್ಯವುಳ್ಳ ಎರಡು ಹೊಸ ಮುನ್ನಡೆಗೆ ಎಡೆಕೊಟ್ಟಿತು: ಬೆಂಕಿಯನ್ನು ಬಳಸುವುದು ಮತ್ತು ಪ್ರಾಣಿಗಳನ್ನು ಸಾಕುವುದು ಮೊದಲನೆಯದಂತೂ ಜೀರ್ಣಕ್ರಿಯೆಯನ್ನು ಮತ್ತಷ್ಟು ಕಡಿಮೆ ಮಾಡಿ ಅರ್ಧಂಬರ್ಧ ಜೀರ್ಣವಾದಂತಿದ್ದ ಪಕ್ವ ಮಾಂಸವನ್ನು ಬಾಯಿಗೆ ಒದಗಿಸಿತ್ತು. ಎರಡನೆಯದು ಮಾಂಸದ ಸರಪರಾಜನ್ನು ಯಥೇಚ್ಛಗೊಳಿಸಿತು. ಬೇಟೆಯ ಜತೆಗೆ ನಿಗದಿಯಾದ ಆ ಹಾರವನ್ನು ಇದು ಗೊತ್ತು ಪಡಿಸಿತ್ತು ಮತ್ತು ಹಾಲು, ಹಾಲ ಉತ್ಪನ್ನಗಳನ್ನು ಹೊಸ ಆಹಾರವನ್ನಾಗಿ ನೀಡಿತ್ತು. ಹಾಲು ಹಾಲ ಉತ್ಪನ್ನಗಳನ್ನೂ ಮಾಂಸದಷ್ಟೇ ಪುಷ್ಟಕರವಾದ ಆಹಾರವಾದವು. ಈ ರೀತಿ ಇವೆರಡು ಹೊಸ ಮುನ್ನಡೆಗಳೂ ಮನುಷ್ಯನ ವಿಮೋಚನೆಗೆ ಪ್ರತ್ಯಕ್ಷ ಸಾಧನಗಳಾದವು. ಮಾನವ ಮತ್ತು ಮಾನವ ಸಮಾಜಗಳ ಬೆಳವಣಿಕೆಯಲ್ಲಿ ಇವುಗಳ ಪ್ರಾಮುಖ್ಯವು ಅತಿಶಯವಾಗಿದ್ದರೂ ಇವುಗಳ ಪರೋಕ್ಷ ಪ್ರಭಾವಗಳನ್ನು ಕುರಿತಿಲ್ಲಿ ವಿಷದವಾಗಿ ವಿಚಾರಿಸತೊಡಗುವುದು ಅಪ್ರಕೃತವಾದೀತು.

ಮನುಷ್ಯನು ಭಕ್ಷಣ ಯೋಗ್ಯವಾದ ಎಲ್ಲವನ್ನೂ ತಿನ್ನಲು ಕಲಿತಂತೆ, ಯಾವ ವಾತಾವರಣದಲ್ಲಾದರೂ ವಾಸಿಸುವುದನ್ನು ಕಲಿತ. ಪ್ರಪಂಚದಲ್ಲಿ ವಾಸ ಯೋಗ್ಯವಾದೆಲ್ಲಲ್ಲೂ ಮನುಷ್ಯ ಹಬ್ಬಿ ಹರಡಿಕೊಂಡ, ಈ ಕಾರ್ಯ ಮಾಡಲು ಮೃಗರಾಶಿಯಲ್ಲೆಲ್ಲ ಶಕ್ತನಾದವನು ಮನುಷ್ಯನೊಬ್ಬನೆ. ಎಲ್ಲ ಹವಾಮಾನಗಳಿಗೂ ಒಗ್ಗಿಕೊಂಡಿರುವ ಇತರ ಪ್ರಾಣಿಗಳಾದ ಸಾಕು ಪ್ರಾಣಿಗಳು ಮತ್ತು ಕ್ರಿಮಿಕೀಟಗಳು ಸ್ವತ ಏವ ಹಬ್ಬಿ ಹರಡಿ ಒಗ್ಗಿಕೊಳ್ಳಲಿಲ್ಲ, ಮನುಷ್ಯನ ಹಿಂದೆ ಅವು ಬಂದವು. ಆದಿ ಮಾನವನ ತವರಿನಲ್ಲಿದ್ದ ಏಕ ಪ್ರಕಾರವಾದ ಸೆಕೆಯ ವಾತಾವರಣದಿಂದ ಶೀತ ಪ್ರದೇಶಗಳಿಗೆ ಆದ ಪರಿವರ್ತನೆಯಿಂದ, ಬೇಸಿಗೆ ಚಳಿಗಾಲಗಳ ಅಪೇಕ್ಷ್ಯ ಮನುಷ್ಯನಿಗೆ ಹೊಸ ಅವಶ್ಯಕತೆಗಳುಂಟಾದವು. ಚಳಿ ತೇವಗಳ ರಕ್ಷಣೆಗಾದ ವಸತಿ ವಸ್ತ್ರಗಳು, ಹೊಸ ದುಡಿಮೆಯ ಕ್ಷೇತ್ರಗಳು, ಹೊಸ ಚಟುವಟಿಕೆಗಳು ಇವೆಲ್ಲ ಮನುಷ್ಯನನ್ನು ಮೃಗರಾಶಿಯಿಂದ ಮತ್ತೆ ಮತ್ತಷ್ಟು ಬೇರ್ಪಡಿಸಿದವು.

ವ್ಯಕ್ತಿಗಳಲ್ಲೇ ಅಲ್ಲ ಸಮಾಜದಲ್ಲೂ ಕೂಡ, ಕೈಗಳು ಮಾತು ಮತ್ತು ಮಿದುಳುಗಳ ಸಹಕಾರದಿಂದ, ಮಾನವರು ಹೆಚ್ಚು ಹೆಚ್ಚು ಕ್ಲಿಷ್ಟವಾದ ಕ್ರಿಯಾ ವಿಶೇಷಗಳನ್ನು ನಿರ್ವಹಿಸಲು ಸಮರ್ಥರಾದರು, ಮತ್ತು ಉನ್ನತ ತರವಾದ ಗುರಿಯನ್ನಿಟ್ಟುಕೊಂಡು ಸಾಧಿಸಲು ದಕ್ಷರಾದರು. ಪ್ರತಿ ತಲೆಮಾರಿನಲ್ಲೂ ದುಡಿಮೆ ಸ್ವರೂಪವೇ

ಬದಲಾಗಿ ಪರಿಷ್ಕೃತವಾಗಿ ವೈವಿಧ್ಯ ಪಡೆಯಿತು. ಬೇಟೆ ಮತ್ತು ಪಶುಪಾ
ಜತೆಗೆ ವ್ಯವಸಾಯವು ಸೇರಿತು. ತರುವಾಯ ನೂಲುವುದು, ನೇಯ್ಗೆ, ಲೋ
ಕರ್ಮ, ಕುಂಬಾರಗೆಲಸ ಮತ್ತು ನೌಕಾಯಾನ ಜತೆಗೂಡಿದವು. ಕೈಗಾ
ವಾಣಿಜ್ಯಗಳ ಜತೆಗೆ ಕಲೆಗಳೂ ವಿಜ್ಞಾನವೂ ಕಂಡುಬಂದವು. ಬಣಗಳಿಂದ ರಾ
ಗಳೂ ರಾಜ್ಯಗಳೂ ಅಭಿವೃದ್ಧಿಗೊಂಡವು. ನ್ಯಾಯಶಾಸ್ತ್ರ ರಾಜ್ಯ ಶಾಸ್ತ್ರಗಳು
ದವು. ಇವುಗಳೊಡನೆ ಮೂಡಿತು ಮನುಷ್ಯನ ಮನದಲ್ಲಿ ಮಾನವತ್
ಬಗ್ಗೆ ಉಂಟಾದ ಪರಮ ವಿಚಿತ್ರ ಭ್ರಾಂತಿಯ ಮಾನವ ಪ್ರತಿಬಿಂಬ: ಧಾರ್ಮಿ
ಮತ. ಮೊದಲು ಇವೆಲ್ಲ ಸೃಷ್ಟಿಗಳೂ ಮಾನವನ ಮನಸ್ಸಿನ ಉತ್ಪನ್ನಗಳ
ಕಂಡುಬಂದು ಮಾನವ ಸಮಾಜವನ್ನು ಗಾಢವಾಗಿ ಪರಿಣಾಮಗೊಳಿಸಿದರೂ, ಇ
ಗಳ ಎಡೆಯಲ್ಲಿ ದುಡಿಯುವ ಕೈಗಳ ನಿರಾಡಂಬರವಾದ ಉತ್ಪನ್ನಗಳು ಹಿಂಬ
ಬಿದ್ದವು. ಏಕೆಂದರೆ, ಸಮಾಜದ ರಚನೆಯ ಪ್ರಾರಂಭಾವಸ್ಥೆಗಳಲ್ಲೆ ದುಡಿ
ಯನ್ನು ನಿಯೋಜಿಸಿದ ಮನಸ್ಸು (ಉದಾಹರಣೆ, ಆದಿರೂಪದ ಕುಟುಂಬಗಳ
ನಿಯುಕ್ತವಾದ ದುಡಿಮೆಯನ್ನು ತನ್ನದಲ್ಲದೆ ಇತರ ಕೈಗಳಿಂದ ನೆರವೇರಿಸಿಕೊಳ್
ಸಮರ್ಥವಾಗಿತ್ತು. ನಾಗರಿಕತೆಯ ಕ್ಷಿಪ್ರವಾದ ಏಳಿಗೆಗೆ ಎಲ್ಲ ಯಶಸ್ಸು ಮ
ಸ್ಸಿಗೇ ಸಂದಾಯವಾಗಿತ್ತು, ಮಿದುಳಿನ ಬೆಳವಣಿಗೆ ಮತ್ತು ಚಟುವಟಿಕೆಗಳಿಗೆ ಸ
ರ್ಪಿತವಾಗಿತ್ತು. ಮನುಷ್ಯರು ತಮ್ಮ ಕಾರ್ಯಗಳಿಗೆ ಅವಶ್ಯಕತೆಗಳ ಸಮರ್ಥ
ಕೊಡುವುದನ್ನು ಬಿಟ್ಟು ಮನೋಭಾವನೆಗಳ ಕಾರಣ ವಿವರಣೆಗಳನ್ನು ಕೊಡುವ
ಭ್ಯಾಸ ಬೆಳೆಸಿಕೊಂಡರು. (ಅವಶ್ಯಕತೆಗಳು ಹೇಗಾದರೂ ಪ್ರತಿಬಿಂಬಗೊಂಡು
ನೋಗೋಚರವಾಗೇ ಆಗುತ್ತವೆ); ಆದಕಾರಣ, ಕಾಲಕ್ರಮದಲ್ಲಿ ಪ್ರಪಂಚದ ಬ
ಭಾವನಾಮಯವಾದ ಧ್ಯೇಯವಾದವು ಎದ್ದಿತು; ಈ ವಾದವು, ಹಳೆಯ ಪ್ರ
ಚವು ಮುಗಿದ ಕಾಲದಿಂದ ಮನುಷ್ಯರ ಮನಸ್ಸಿನ ಮೇಲೆ ಪ್ರಬಲವಾದ ಆಧಿಪ
ವನ್ನು ನಡೆಸುತ್ತ ಬಂದಿದೆ. ಇವತ್ತಿಗೂ ಈ ಆಧಿಪತ್ಯವು ಎಷ್ಟುಮಟ್ಟಿಗೆ ನಡೆದ
ಯೆಂದರೆ, ಡಾರ್ವಿನ್ ಪಂಥಕ್ಕೆ ಸೇರಿದ ವಾಸ್ತವತಾ ವಾದಿಗಳಾದ ಪ್ರಕೃತಿ ವಿಜ್ಞಾ
ಗಳೂ ಕೂಡ ಮಾನವ ಮೂಲವನ್ನು ಕುರಿತು ಯಾವೊಂದು ಸ್ಪಷ್ಟ ಭಾವನೆಯನ
ಕಲ್ಪಿಸಿಕೊಳ್ಳಲೂ ಅಸಮರ್ಥರಾಗಿದ್ದಾರೆ; ಏಕೆಂದರೆ ಈ ಭಾವನಾತ್ಮಕವಾ
ಧ್ಯೇಯವಾದದ ಪ್ರಭಾವದಲ್ಲಿ ದುಡಿಮೆಯು ನಿರ್ವಹಿಸಿರುವ ಪಾತ್ರವನ್ನು ಅವ
ಗಣನೆಗೆ ತೆಗೆದುಕೊಳ್ಳುತ್ತಿಲ್ಲ.

ಈ ಮುಂಚೆ ಸೂಚಿಸಿರುವಂತೆ ಪ್ರಾಣಿಗಳು, ಮನುಷ್ಯನಂತೆಯೆ, ಅವನಷ್ಟು ಮಟ್ಟಿಗಲ್ಲದಿದ್ದರೂ, ತಮ್ಮ ಚಟುವಟಿಕೆಯಿಂದ ಹೊರಗಿನ ಪ್ರಕೃತಿ ಸ್ಥಿತಿಯನ್ನು ಬದಲಾವಣೆ ಮಾಡುತ್ತವೆ; ಮತ್ತು ತಮ್ಮ ಸುತ್ತಮುತ್ತಲ ಪರಿಸ್ಥಿತಿಯಲ್ಲಿ ಅವು ಆಗುಮಾಡಿಸುವ ಈ ಬದಲಾವಣೆಗಳು, ನಾವೀಗ ಕಂಡಂತೆ, ತಮ್ಮ ಕರ್ತಾರರ ಮೇಲೆ ಪ್ರತಿಕ್ರಿಯೆ ಮಾಡಿ ಅವರನ್ನೇ ಬದಲಾಯಿಸುತ್ತವೆ. ಯಾಕೆಂದರೆ, ಪ್ರಕೃತಿಯಲ್ಲಿ ಯಾವೊಂದೂ ಪೃಥಕ್ ಆಗಿ, ಅಲಕ್ ಆಗಿ ನಡೆಯುವುದಿಲ್ಲ. ಪ್ರತಿಯೊಂದೂ ಪ್ರತಿಯೊಂದನ್ನು ಪ್ರಭಾವಿಸುತ್ತದೆ. ಈ ಸರ್ವತೋಮುಖವಾದಕ್ರಿಯೆ ಮತ್ತು ಪರಸ್ಪರ ಪ್ರತಿಕ್ರಿಯೆಗಳನ್ನು ಮರೆಯುತ್ತಾರಾಗಿ, ನಮ್ಮ ಪ್ರಕೃತಿ ವಿಜ್ಞಾನಿಗಳಿಗೆ ಸರಳವಾದ ಸಂಗತಿಗಳನ್ನು ಕಾಣಲು ಸಾಧಾರಣವಾಗಿ ಅಡಚಣೆಗಳುಂಟಾಗುತ್ತವೆ. ಗ್ರೀಸಿನಲ್ಲಿ ಕಾಡುಗಳು ಮತ್ತೆ ಬೆಳೆಯದಿರಲು ಮೇಕೆಗಳೇ ಹೇಗೆ ಕಾರಣ ಎಂಬುದನ್ನು ನಾವು ಕಂಡಿದ್ದೇವೆ; ಸೇಂಟ್ ಹೆಲೀನಾ ದ್ವೀಪದಲ್ಲಿ ಮೊದಲ ನಾವಿಕರು ಕೊಂಡೊಯ್ದು ಬಿಟ್ಟ ಮೇಕೆಗಳೂ ಹಂದಿಗಳೂ ಅಲ್ಲಿನ ಹಳೆ ಸಸ್ಯಜಾತಿಯನ್ನೆ ನಿರ್ಮೂಲಮಾಡಿ, ತರುವಾಯ ಬಂದ ನಾವಿಕರೂ ವಲಸೆಗಾರರೂ ಜತೆಗೆ ತಂದ ಮರಗಿಡ ಸಸ್ಯಗಳು ಬೆಳೆಯಲು ಭೂಶುದ್ಧಿಯನ್ನು ಮಾಡಿವೆ. ಆದರೆ ಪ್ರಾಣಿಗಳು ತಮ್ಮ ಆವರಣದ ಮೇಲೆ ಉಂಟುಮಾಡುವ ಪರಿಣಾಮ ಪ್ರಭಾವಗಳು ಅನೈಚ್ಛಿಕವಾದವು; ಪ್ರಾಣಿಗಳ ಪಾಲನೆ ಅವೆಲ್ಲ ಕೇವಲ ಆಕಸ್ಮಿಕ. ಪ್ರಾಣಿವರ್ಗದಿಂದ ಮನುಷ್ಯನು ಎಷ್ಟುದೂರ ಬೇರೆಯಾಗಿರುತ್ತಾನೋ, ಅಷ್ಟು ಮಟ್ಟಿಗೆ ಪ್ರಕೃತಿಯ ಮೇಲೆ ಅವನಿಂದಾಗುವ ಪರಣಾಮವು, ಮುಂಗಡವಾಗಿಯೆ ಖಚಿತಗೊಂಡ ಗುರಿಗತ್ತ ನೆರವೇರುವ ನಿಯೋಜಿತವಾದ ಪೂರ್ವನಿಶ್ಚಿತ ಕಾರ್ಯವಿಧಾನದ ಲಕ್ಷಣವನ್ನು ಪಡೆಯುತ್ತದೆ. ತಾವೇನು ಮಾಡುತ್ತಿದೆಯೆಂಬುದನ್ನು ಮನಗಾಣದೆಯೆ ಪ್ರಾಣಿಯು ತನ್ನ ಸ್ಥಳದಲ್ಲಿರುವ ಸಸ್ಯವನ್ನು ಧ್ವಂಸಮಾಡುತ್ತದೆ. ಮನುಷ್ಯನಾದರೊ ಈ ರೀತಿ ಬಿಡುವಾದ ಭೂಮಿಯಲ್ಲಿ ಉತ್ತುಬಿತ್ತಲೂ ಮರಗಳನ್ನೂ ದ್ರಾಕ್ಷಾ ಬಳ್ಳಿಗಳನ್ನೂ ನೆಟ್ಟು ಬಿತ್ತನೆಗಿಂತ ಹಲವಾರುಪಟ್ಟುಕಾಳನ್ನೊ ಫಲವನ್ನೊ ಪಡೆದುಕೊಳ್ಳುವ ತಿಳಿವಳಿಕೆಯಿಂದ ಮಾತ್ರ ಕಳೆಸಸ್ಯಗಳನ್ನು ಧ್ವಂಸ ಮಾಡುತ್ತಾನೆ, ಒಂದು ದೇಶದಿಂದ ಬೇರೊಂದು ದೇಶಕ್ಕೆ ಉಪಯುಕ್ತವಾದ ಗಿಡಗಳನ್ನೂ ಪ್ರಾಣಿಗಳನ್ನೂ ಸಾಗಿಸುತ್ತಾನೆ. ಈ ರೀತಿ ಇಡೀ ಖಂಡಗಳ ಸಸ್ಯ ಪ್ರಾಣಿಗಳ ಸಂಪದವನ್ನೆ ಬದಲಾವಣೆಗೊಳಿಸುತ್ತಾನೆ. ಇಷ್ಟೇ ಅಲ್ಲ. ಮನುಷ್ಯನ ಕೈಯಲ್ಲಿ ಪ್ರಾಣಿ

ಗಳೂ ಸಸ್ಯಗಳೂ ಕೃತಕ ವಿಧಾನಗಳಿಂದ ಅಜ್ಞಾತವಾಗಿ ಗುರುತೇ ಸಿಗದಷ
ವ್ಯತ್ಯಾಸಗೊಳ್ಳುತ್ತಿವೆ. ನಮ್ಮ ಆಹಾರಧಾನ್ಯಗಳನ್ನು ನೀಡಿದ ಸಸ್ಯಮೂಲಗಳ
ವವು ಎಂಬುವನ್ನು ಇನ್ನೂ ಅರಸುತ್ತಿದ್ದಾರೆ. ತಮ್ಮ ತಮ್ಮಲ್ಲೇ ಅಷ್ಟೊಂದು ವೈ
ಧ್ಯಗಳನ್ನು ಪಡೆದಿರುವ ನಮ್ಮ ನಾಯಿಗಳ ಮೂಲವಾದ ಕಾಡುನಾಯಿಯಾವುದು
ಅಷ್ಟೆ ವಿಭಿನ್ನವೂ ವಿವಿಧವೂ ಆದ ಕುದುರೆಗಳ ಮೂಲವಾದ ಕಾಡುಪ್ರಾ
ಯಾವುದು ಈ ಪ್ರಶ್ನೆಗಳು ಇನ್ನೂ ವಿವಾದಾಸ್ಪದವಾಗಿವೆ

ಹೇಗಾದರೂ ಪ್ರಾಣಿಗಳು ನಿಯೋಜಿತವಾದ ಪೂರ್ವನಿಶ್ಚಿತ ರೀತಿಯಲ್ಲಿ
ನಡೆದುಕೊಳ್ಳಲು ಸಮರ್ಥವಾದುವು ಎಂಬುದನ್ನು ನಾವು ವಿವಾದಿಸುವುದಿಲ್ಲ
ಅದಕ್ಕೆ ಬದಲಾಗಿ, ಎಲ್ಲೆಲ್ಲಿ ಜೀವ ದ್ರವ್ಯವೂ ಸಚೇತನವಾದ ಲೋಳೆಯೂ ಇದ್ದು
ಪ್ರತಿಕ್ರಿಯೆಯುಂಟು ಮಾಡುತ್ತವೆಯೋ, ಅಂದರೆ, ಹೊರ ಪ್ರೇರಣೆಗಳ ಪರಿಣಾಮವಾಗಿ
ಸರ್ವಥಾಸರಳವಾದರೂ ನಿರ್ದಿಷ್ಟವಾದ ಚಲನಗಳನ್ನು ನೆರವೇರಿಸುತ್ತವೆಯೋ ಅಂಥ
ಎಲ್ಲ ಭ್ರೂಣಗಳಲ್ಲೂ ನಿಯೋಜಿತ ಕಾರ್ಯವಿಧಾನವು ಇರುತ್ತದೆ. ಇಂಥ ಪ್ರತಿ
ಕ್ರಿಯೆಯು, ನರ ಕಣದ ಮಾತಿರಲಿ ಜೀವ ಕಣವನ್ನೇ ಮೂಡದಿರುವ ಗರ್ಭಾವಸ್ಥೆ
ಗಳಲ್ಲೂ ಇರುತ್ತದೆ. ಕ್ರಿಮಿ ಭಕ್ಷಕ ಗಿಡಗಳು ತಮ್ಮ ಬಲಿಯನ್ನು ಹಿಡಿಯುವ
ರೀತಿಯು ಒಂದು ವಿಧದಲ್ಲಿ ಇಂಥ ನಿಯೋಜಿತವಾದ, ಆದರೆ ಬುದ್ಧಿ ಪೂರ್ವಕ
ವಲ್ಲದೆ ನಿರ್ವಹಿಸಲ್ಪಟ್ಟ ಕಾರ್ಯ ವಿಧಾನವನ್ನು ಸೂಚಿಸುತ್ತದೆ. ಪ್ರಾಣಿಗಳಲ್ಲಿ
ಬುದ್ಧಿ ಪೂರ್ವಕವಾದ, ನಿಯೋಜಿತ ಕಾರ್ಯವನ್ನು ನಿರ್ವಹಿಸುವ ಸಾಮರ್ಥ್ಯವು
ನರ ಮಂಡಲದ ಬೆಳವಣಿಗೆಗೆ ತಕ್ಕ ಪ್ರಮಾಣದಲ್ಲಿ ಬೆಳೆಯುತ್ತದೆ ಮತ್ತು ಸಸ್ತನಿಗಳಲ್ಲಿ
ಅದು ಉನ್ನತವಾದ ಮಟ್ಟವನ್ನೇ ಐದುತ್ತದೆ. ಇಂಗ್ಲೆಂಡಿನಲ್ಲಿ ನರಿ ಬೇಟೆಯ ಕಾಲ
ದಲ್ಲಿ, ನರಿಯು ಬೇಟೆಗಾರರನ್ನು ತಪ್ಪಿಸಿಕೊಳ್ಳಲು ಸ್ಥಳ ಲಕ್ಷಣಗಳನ್ನು ಕುರಿತ
ತನ್ನ ಪ್ರಶಸ್ತವಾದ ಅನುಭವವನ್ನು ತಪ್ಪದೆ ತಡವರಿಸದೆ ಹೇಗೆ ಉಪಯೋಗಿಸಿ
ಕೊಳ್ಳುತ್ತದೆ, ಮತ್ತು ವಾಸನೆಯು ತಪ್ಪುವಂತೆ ನೆಲದ ತಗ್ಗು ದಿಣ್ಣೆಗಳನ್ನೆಲ್ಲ ತನ್ನ
ಅನುಕೂಲಕ್ಕೆ ಹೇಗೆ ಬಳಸಿಕೊಳ್ಳುತ್ತದೆ ಎಂಬುದನ್ನು ಯಾರಾದರೂ ಕಾಣಬಹುದು.
ಸಾಕು ಪ್ರಾಣಿಗಳಲ್ಲಿ ಪ್ರತಿ ನಿತ್ಯವೂ ಮಕ್ಕಳಲ್ಲಿ ಕಂಡು ಬರುವಂಥ ಯುಕ್ತಿಯು
ಕಾರ್ಯಗಳನ್ನು ಯಾರಾದರೂ ಕಾಣಬಹುದು. ಏಕೆಂದರೆ, ತಾಯಗರ್ಭದಲ್ಲಿ
ರುವ ಭ್ರೂಣದ ಬೆಳವಣಿಗೆಯ ಚರಿತ್ರೆಯು, ಲಕ್ಷಾಂತರ ವರ್ಷಗಳ ಕಾಲಾವಧಿಯಲ್ಲಿ
ನಮ್ಮ ಮೃಗ ಪೂರ್ವಜರು ಹುಳುವಿನ ಅವಸ್ಥೆಯಿಂದ ಮೊದಲ್ಗೊಂಡು ಐದಿರುವ

ದೈಹಿಕ ಪ್ರಗತಿಯು ಸಂಕ್ಷಿಪ್ತವಾದ ಇತಿಹಾಸವೇ ಆಗಿರುವಂತೆ, ಮಾನವ ಶಿಶುವಿನ ಮಾನಸಿಕ ಬೆಳವಣಿಕೆಯೂಕೂಡ ಇವೇ ಪೂರ್ವಜರ, ಕಡೆಪಕ್ಷ ಅವರ ಪೈಕಿ ಕೊಂಚ ಈಚಿನವರ ಮಾನಸಿಕ ಬೆಳವಣಿಕೆಯ ಇನ್ನಷ್ಟು ಸಂಕ್ಷಿಪ್ತವಾದ ಇತಿಹಾಸದ ಪುನರಾವೃತ್ತಿಯಾಗಿದೆ. ಆದರೆ ಈ ಸಮಸ್ತ ನಿಯೋಜಿತ ಕಾರ್ಯಕ್ರಮಗಳು ಸೇರಿದರೂ ಭೂಮಿಯ ಮೇಲೆ ಪ್ರಾಣಿಗಳು ತಮ್ಮ ಮನೋನಿಶ್ಚಯದ ಮುದ್ರೆಯೊತ್ತಲು ಸಾರ್ಥಕವಾಗಿಲ್ಲ. ಆ ಕಾರ್ಯಮಾಡಲು ಮನುಷ್ಯ ಬೇಕಾಗಿತ್ತು.

ಒಟ್ಟಿನಲ್ಲಿ, ಪ್ರಾಣಿಯು ಹೊರಗಣ ಪ್ರಕೃತಿಯನ್ನು ಸುಮ್ಮನೆ **ಬಳಸಿಕೊಳ್ಳುತ್ತದೆ** ಮತ್ತು ತನ್ನ ಇರುವಿಕೆಯಿಂದ ಎಷ್ಟೋ ಅಷ್ಟು ಮಾತ್ರ ಬದಲಾವಣೆಗಳನ್ನು ಉಂಟು ಮಾಡುತ್ತದೆ. ಮನುಷ್ಯನಾದರೋ ತನ್ನ ಬದಲಾವಣೆಗಳಿಂದ ಪ್ರಕೃತಿಯನ್ನು ತನ್ನ ಉದ್ದೇಶ ಸಾಧನೆಗೆ ಒದಗಿಸಿಕೊಳ್ಳುತ್ತಾನೆ, **ಪ್ರಕೃತಿಯನ್ನು ಸ್ವಾಧೀನ ಪಡಿಸಿಕೊಳ್ಳುತ್ತಾನೆ.** ಇದೇ ಮನುಷ್ಯನಿಗೂ ಪ್ರಾಣಿಗಳಿಗೂ ಇರುವ ನಿರ್ಣಯಕರವಾದ ಮುಖ್ಯ ವಿಭಿನ್ನತೆ, ಮತ್ತು ವಿಭಿನ್ನತೆ ವೈಶಿಷ್ಟ್ಯಗಳನ್ನು ಆಗುಮಾಡಿಸುವುದು ದುಡಿಮೆಯೇ.

ಆದರೂ ನಾವು ಪ್ರಕೃತಿಯ ಮೇಲಣ ಮಾನವ ವಿಜಯಗಳಿಗಾಗಿ ಸ್ವಪ್ರಶಂಸೆಯನ್ನು ಅತಿಶಯವಾಗಿ ಮಾಡಿಕೊಳ್ಳದಿರೋಣ. ಏಕೆಂದರೆ ಅಂಥ ಪ್ರತಿಯೊಂದು ವಿಜಯಕ್ಕೂ ತಕ್ಕ ಪ್ರತೀಕಾರ ಇದ್ದೇ ಇದೆ. ಪ್ರತಿಯೊಂದು ವಿಜಯವೂ ನಾವು ಪ್ರಥಮತಃ ನಿರೀಕ್ಷಿಸಿದ್ದಂತೆ ತಕ್ಕ ಪರಿಣಾಮಗಳನ್ನು ಉಳ್ಳದ್ದೇ ಆಗಿದೆ; ಆದರೆ ದ್ವಿತೀಯ, ತೃತೀಯ ಸ್ಥಾನದಲ್ಲಿ ಮಾತ್ರ ಅನಿರೀಕ್ಷಿತವಾದ ಪ್ರತ್ಯೇಕವಾದ ಪರಿಣಾಮಗಳುಂಟಾಗಿ ಹಲವು ಬಾರಿ ಪ್ರಥಮ ಪರಿಣಾಮಗಳನ್ನು ಹೊಡೆದು ಹಾಕುತ್ತವೆ. ಮೆಸಪೊಟೇಮಿಯ, ಗ್ರೀಸ್, ಏಷಿಯ ಮೈನರ್ ಮುಂತಾದ ಕಡೆ ಕಾಡುಗಳನ್ನೆಲ್ಲ ಸಂಪೂರ್ಣವಾಗಿ ನಿಪಾತಮಾಡಿ ವ್ಯವಸಾಯದ ಭೂಮಿಯನ್ನು ಪಡೆಯಲೆತ್ನಿಸಿದ ಜನರು ಕಾಡನ್ನು ನಿವಾರಿಸಿಕೊಳ್ಳುವುದರ ಜತೆಗೆ ತೇವ ತಂಪು ಒಟ್ಟುಗೂಡುವ ಕೇಂದ್ರಗಳನ್ನೂ ಆಸರೆಗಳನ್ನೂ ತೊಡೆದುಹಾಕಿ ತನ್ಮೂಲಕ ತಮ್ಮ ದೇಶಗಳ ಇವತ್ತಿನ ಬೆಂಗಾಡು ಪರಿಸ್ಥಿತಿಗೆ ಅಡಿಪಾಯ ಹಾಕುತ್ತಿದ್ದರು ಎಂಬುದನ್ನು ಸ್ವಪ್ನೇಪಿ ಕಂಡಿರಲಿಲ್ಲ. ಆಲ್ಪ್ಸ್ ಪರ್ವತ ಪ್ರದೇಶದ ಇಟಾಲಿಯನ್ನರು ತಮ್ಮ ದೇಶದ ಕಡೆ ಪರ್ವತದ ಇಳಿಜಾರು ಪ್ರದೇಶಗಳಲ್ಲಿ ಪೀತದಾರು ವೃಕ್ಷಗಳನ್ನು ಬಳಸಿ

ಕೊಂಡಾಗ, ತಮ್ಮ ಪ್ರಾಂತದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾವಾಡಿಗ ಕೈಗಾರಿ
ಕೆಯ ಬುಡಕ್ಕೆ ಕೊಡಲಿಪೆಟ್ಟು ಹಾಕಿಕೊಳ್ಳುತ್ತಿದ್ದುದರ ಅರಿವೇ ಅವರಿಗಿರಲಿಲ್ಲ.
ಅಲ್ಲದೆ ಈ ಮೂಲಕ ತಮ್ಮ ಗಿರಿಝರಿಗಳಿಗೆ ವರ್ಷದಲ್ಲಿ ಹೆಚ್ಚು ಭಾಗ ನೀರಿಲ್ಲದಂತೆ
ಮಾಡಿ, ಮಳೆಗಾಲದಲ್ಲಿ ಬಯಲ ಮೇಲೆ ಘೋರವಾದ ಪ್ರಪಾತಗಳು ಬಂದು
ಅಡರುವಂತೆಯೂ ಮಾಡುತ್ತಿದ್ದರೆಂಬುದರ ಅರಿವೂ ಕೂಡ ಅವರಿಗೆ ಸುತರಾಂ
ಇರಲಿಲ್ಲ. ಯೂರೋಪಿನಲ್ಲಿ ಆಲೂಗಡ್ಡೆಯನ್ನು ಹಬ್ಬಿಸಿದ ಜನರು ಈ ಪಿಷ್ಟ
ಮಯವಾದ ಗೆಡ್ಡೆಗಳೊಡನೆ ಗಂಡಮಾಲೆಯನ್ನು ಹರಡುತ್ತಿದ್ದರೆಂಬುದನ್ನು ಅರಿತಿರ
ಲಿಲ್ಲ. ಈ ರೀತಿ ಪ್ರತಿಹೆಜ್ಜೆಲ್ಲೂ ನಾವು ಯಾವುದೋ ಪರಕೀಯ ವಿಜೇತನಂತೆ
ಪ್ರಕೃತಿಯ ಮೇಲೆ, ಪ್ರಕೃತಿಯಿಂದ ದೂರ ನಿಂತಿರುವ ವಿಜೇತನಂತೆ, ಆಳಲು
ಶಕ್ಯವಿಲ್ಲ ಎಂಬುದು ನಮಗೆ ನೆನಪಾಗುತ್ತದೆ—ನಾವು ನಮ್ಮ ರಕ್ತಮಾಂಸ ಮಿದುಳು
ಮುಂತಾದ ಸಮಸ್ತ ಅಂಗಾಂಗಗಳಿಂದ ಕೂಡಿ ಪ್ರಕೃತಿಗೆ ಸೇರಿದವರು, ಪ್ರಕೃ
ತಿಯ ಮಡಿಲಲ್ಲಿ ಇರತಕ್ಕವರು ಮತ್ತು ನಾವು ಪ್ರಕೃತಿಯ ಮೇಲೆ ಪಡೆದಿರುವ
ಅಧಿಕಾರವು ಎಷ್ಟೆಂದರೆ ಪ್ರಕೃತಿಯ ನಿಯಮಗಳನ್ನು ಉಚಿತವಾಗಿ ತಿಳಿದುಕೊಂಡು
ಅವನ್ನು ಕರಾರುವಾಕ್ಕಾಗಿ ಅನುಷ್ಠಾನಕ್ಕೆ ಒದಗಿಸಿಕೊಳ್ಳುವುದರಲ್ಲಿ ನಾವು ಇತರ
ಪ್ರಾಣಿಗಳಿಗಿಲ್ಲದಂಥ ಸೌಲಭ್ಯವನ್ನು ಗಳಿಸಿಕೊಂಡಿದ್ದೇವೆಂಬುದೆಷ್ಟೋ ಅಷ್ಟೆ.

ಮತ್ತು ವಾಸ್ತವವಾಗಿ, ನಾವು ದಿನಕಳೆದಂತೆಲ್ಲ ಪ್ರಕೃತಿ ನಿಯಮಗಳನ್ನು
ಹೆಚ್ಚು ಹೆಚ್ಚು ನಿಶ್ಚಿತವಾಗಿ ಕಲಿಯುತ್ತಿದ್ದೇವೆ ಮತ್ತು ಪ್ರಕೃತಿ ಪಾರಂಪರ್ಯದ
ಗತಿಗಮನಗಳ ನಡುವೆ ನಾವು ಕೈ ಹಾಕುತ್ತಿರುವುದರ ಸದ್ಯದ ಪರಿಣಾಮಗಳನ್ನೂ
ದೂರದ ಪರಿಣಾಮಗಳನ್ನೂ ಗ್ರಹಿಸಲು ಪ್ರಾರಂಭಿಸಿದ್ದೇವೆ. ಉದಾಹರಣೆಗೆ, ಈ
ಶತಮಾನದಲ್ಲಿ ಆಗಿರುವ ಪ್ರಚಂಡವಾದ ಪ್ರಕೃತಿ ವಿಜ್ಞಾನದ ಪ್ರಗತಿಯ ಫಲವಾಗಿ,
ನಮ್ಮ ಅತ್ಯಂತ ಸಾಧಾರಣವಾದ ಸಂತಾನೋತ್ಪತ್ತಿಯ ಚಟುವಟಿಕೆಗಳ ಅತ್ಯಂತ
ದೂರವಾದ ಪರಿಣಾಮಗಳನ್ನಾದರೂ ತಿಳಿದುಕೊಂಡು, ತತ್ಕಾರಣ, ಹತೋಟಿ
ಪಡಿಸಿಕೊಳ್ಳುವ ಸ್ಥಿತಿಯಲ್ಲಿ ನಾವಿಂದು ಇದ್ದೇವೆ. ಇದು ಹೆಚ್ಚು ಹೆಚ್ಚಾಗಿ ಆದಂ
ತೆಲ್ಲ ಮಾನವನು ಪ್ರಕೃತಿಯೊಡನೆ ತನ್ನ ಏಕತೆಯನ್ನು ಅನುಭಾವಿಸುವುದಲ್ಲದೆ
ಸ್ಪಷ್ಟವಾಗಿ ನಿಶ್ಚಯ ಪಡಿಸಿಕೊಳ್ಳುತ್ತಾನೆ ಮತ್ತು ಇದು ಮನಸ್ಸು ಅದು ಪದಾರ್ಥ,
ಇದು ಮನುಷ್ಯ! ಅದು ಪ್ರಕೃತಿ, ಇದು ಜೀವ ಅದು ದೇಹ, ಎಂಬ ವಿಚಕ್ಷಣಾ

ಹೀನವಾದ ಅಸ್ವಾಭಾವಿಕವಾದ ಭಿನ್ನಭಾವವು—ಯೂರೋಪಿನಲ್ಲಿ ಪ್ರಾಚೀನ ಪಾಂಡಿತ್ಯ ಪರಂಪರೆಯು ನಶಿಸಿದ ತರುವಾಯ ಕ್ರಿಶ್ಚಿಯನ್ ಧರ್ಮ ವ್ಯವಸ್ಥೆಯಲ್ಲಿ ತನ್ನ ಅತ್ಯುನ್ನತವಾದ ಪರಿಷ್ಕೃತ ವೈಶಿಷ್ಟ್ಯವನ್ನು ಪಡೆದ ಭಿನ್ನಭಾವವು, ಹೆಚ್ಚು ಹೆಚ್ಚಾಗಿ ಅಸಾಧ್ಯವಾಗುತ್ತದೆ

ಆದರೆ, ಉತ್ಪನ್ನವನ್ನು ನೆರವೇರಿಸಲು ನಿರ್ದೇಶಿಸಲ್ಪಟ್ಟ ನಮ್ಮ ಕಾರ್ಯ ಕಲಾಪಗಳ ಅತಿದೂರದ **ಪ್ರಾಕೃತಿಕ** ಪರಿಣಾಮಗಳನ್ನು ಕೊಂಚಮಟ್ಟಿಗೆ ತಿಳಿದು ಕೊಳ್ಳಲು ಸಾವಿರಾರು ವರ್ಷಗಳ ಕಾಲದ ದುಡಿಮೆಯು ಬೇಕಾಗಿತ್ತಾದರೆ, ಈ ಕಾರ್ಯ ಕಲಾಪಗಳ ಅತಿ ದೂರದ **ಸಾಮಾಜಿಕ** ಪರಿಣಾಮಗಳನ್ನು ತಿಳಿದು ಕೊಳ್ಳಲು ಇನ್ನಷ್ಟು ದುಸ್ತರವಾಗಿದೆ. ನಾವೀಗ ಆಲೂಗಡ್ಡೆ ಮತ್ತು ಗಂಡ ಮಾಲೆಯ ಸಂಗತಿಯನ್ನು ತಿಳಿಸಿದ್ದೇವೆ. ಆದರೆ ಹೋಲಿಸಿನೋಡ ತೊಡಗಿದರೆ ಗಂಡಮಾಲೆಯು ಆಲೂಗಡ್ಡೆಯಿಂದುಂಟಾದ ಇತರ ಪರಿಣಾಮಗಳ ಮುಂದೆ ಎಷ್ಟ ರದು? ಕೆಲಸಗಾರರನ್ನು ಕೇವಲ ಆಲೂಗಡ್ಡೆ ಆಹಾರಕ್ಕೆ ಇಳಿಸಿ ಬಿಟ್ಟಕಾರಣ ಇಡೀ ಖಂಡಗಳಲ್ಲಿ ಜನರಾಶಿಯ ಜೀವನ ಪರಿಸ್ಥಿತಿಗಳ ಮೇಲೆ ಮಹತ್ತರ ಪರಿಣಾಮ ವುಂಟಾಗಿದೆ; ಆಲೂಗಡ್ಡೆ ಬೆಳೆಗೆ ತಗುಲಿದ ಕೆಟ್ಟ ರೋಗದ ಪರಿಣಾಮವಾಗಿ 1841ರಲ್ಲಿ ಇಡೀ ಐರ್ಲೆಂಡಿಗೆ ಕ್ಷಾಮವೊದಗಿ ಕೇವಲ ಆಲೂಗಡ್ಡೆ ಆಹಾರದ ಮೇಲೆ ಬದುಕಿದ್ದ ಸುಮಾರು 10 ಲಕ್ಷ ಮಂದಿ ಐರಿಷ್ ಜನರನ್ನು ಸಾವಿಗೀಡು ಮಾಡಿತು ಮತ್ತು 20 ಲಕ್ಷ ಐರಿಷ್ ಜನರಾಶಿಯನ್ನು ವಲಸೆ ಎತ್ತಿ ಹೋಗುವಂತೆ ಮಾಡಿತು! ಅರಬ್ಬರು ಮದ್ಯಸಾರವನ್ನು ಭಟ್ಟಿಯಿಳಿಸುವ ಕ್ರಮವನ್ನು ಕಲಿತಾಗ, ತಾವು ಮಾಡುತ್ತಿದ್ದ ಈ ಕಾರ್ಯದಿಂದ ಆಗಿನ್ನೂ ಯಾರೂ ಕಂಡುಹಿಡಿಯದೇ ಇದ್ದ ಇಡೀ ಅಮೆರಿಕ ಖಂಡದ ಮೂಲ ನಿವಾಸಿಗಳ ನಿರ್ಮೂಲನಕ್ಕೊಂದು ಅಸ್ತ್ರವನ್ನು ತಯಾರಿಸಿಕೊಡುತ್ತಿದ್ದರೆಂಬುದು ಅವರ ತಲೆಯನ್ನು ಹೊಕ್ಕಿರಲಿಲ್ಲ. ಮತ್ತು ಕೊಲಂಬಸನು ಇದೇ ಅಮೆರಿಕವನ್ನು ಕಂಡುಹಿಡಿದಾಗ, ಯೂರೋಪು ಖಂಡದಲ್ಲಿ ಅಷ್ಟರವೇಳೆಗಾಗಲೆ ರದ್ದುಗೊಳಿಸಲ್ಪಟ್ಟಿದ್ದ ಗುಲಾಮಗಿರಿಯನ್ನು ಅಮೇರಿಕದಲ್ಲಿ ಹಬ್ಬಿಸಲು ಕಾರಣನಾದನೆಂಬುದನ್ನಾಗಲಿ ನೀಗ್ರೋಗಳ ಗುಲಾಮ ವ್ಯಾಪಾರಕ್ಕೆ ಅಡಿಪಾಯವನ್ನು ಹಾಕುತ್ತಿದ್ದನೆಂಬುದನ್ನಾಗಲಿ ಅವನು ಅರಿತಿರಲಿಲ್ಲ. ಹದಿನೇಳು ಹದಿನೆಂಟನೆಯ ಶತಮಾನಗಳಲ್ಲಿ ಹಬೆ ಯಂತ್ರವನ್ನು ಕಂಡುಹಿಡಿಯಲು ಶ್ರಮಿಸಿದ

ವರೆಗೆ ಆ ಯಂತ್ರ ಸಾಧನವು ಇಡೀ ಪ್ರಪಂಚದಲ್ಲಿ ಸಾಮಾಜಿಕ ಪರಿಸ್ಥಿತಿಗಳ ಕ್ರಾಂತಿಯನ್ನುಂಟು ಮಾಡುವುದೆಂಬ ಕಲ್ಪನೆಯೇ ಇರಲಿಲ್ಲ. ತತ್ರಾಪಿ ಯೂರೋಪಿನಲ್ಲಿ, ಸಂಪತ್ತನ್ನು ಕೇವಲ ಕೆಲವರ ಕೈಯಲ್ಲಿ ಕೇಂದ್ರೀಕರಿಸಿ, ಈ ಮೂಲಕ ಅತ್ಯಧಿಕ ಜನರಾಶಿಯನ್ನು ರಿಕ್ತರನ್ನಾಗಿ ಮಾಡುವ ಮೂಲಕ ಈ ಯಂತ್ರ ಸಾಧನವು ಮೊದಲು ಸಾಮಾಜಿಕ ಮತ್ತು ರಾಜಕೀಯ ಅಧಿಕಾರ ಪ್ರಾಬಲ್ಯಗಳನ್ನು ಮಧ್ಯಮ ವರ್ಗದವರಿಗೆ ನೀಡಿ, ತರುವಾಯ ಮಧ್ಯಮ ವರ್ಗಕ್ಕೂ ರಿಕ್ತ ಜನರಾಶಿಗೂ ವರ್ಗ ಕಲಹವನ್ನುಂಟುಮಾಡಲು ವಿಧಾಯಕಗೊಂಡಂತಿತ್ತು — ಈ ವರ್ಗ ಕಲಹವು ಮಧ್ಯಮ ವರ್ಗದವರನ್ನುರುಳಿಸಿ, ಎಲ್ಲ ವರ್ಗ ಕಲಹಗಳನ್ನೂ ನಿವಾರಿಸುವುದರಲ್ಲಿ ಮಾತ್ರ ಪರ್ಯವಸಾನಗೊಂಡೀತು. ಈ ಕ್ಷೇತ್ರದಲ್ಲೂ ಕೂಡ ದೀರ್ಘವೂ ಹಲವು ಸಲ ಕಠೋರವೂ ಆದ ಅನುಭವದಿಂದ ಮತ್ತು ಐತಿಹಾಸಿಕ ಸಾಕ್ಷ್ಯ ಸಂಗತಿಗಳನ್ನು ಸಂಗ್ರಹಿಸಿ ವಿಶ್ಲೇಷಿಸುವುದರಿಂದ ಮಾತ್ರ ನಾವು ನಮ್ಮ ಉತ್ಪಾದನ ಕಾರ್ಯಕ್ರಮಗಳ ಪರೋಕ್ಷವೂ ದೂರವೂ ಆದ ಸಾಮಾಜಿಕ ಪರಿಣಾಮಗಳ ಸ್ಪಷ್ಟವಾದ ಭಾವನೆಯನ್ನು ಗಳಿಸಲು ಸಮರ್ಥರಾಗಿದ್ದೇವೆ ಮತ್ತು ಈ ಮೂಲಕ ಈ ಪರಿಣಾಮಗಳನ್ನೂ ಕೂಡ ಹತೋಟಿ ಪಡಿಸಿಕೊಂಡು ಗೊತ್ತುಗುರಿಗೊಳಿಸಲು ಅವಕಾಶವನ್ನು ಪಡೆದುಕೊಂಡಿದ್ದೇವೆ.

ಆದಾಗ್ಯೂ, ಈ ಗೊತ್ತು ಗುರಿ ಸಾಧಿಸಲು ಕೇವಲ ತಿಳುವಳಿಕೆಗಿಂತ ಹೆಚ್ಚಿನದು ಅಗತ್ಯವಾಗಿದೆ. ಈಗಿರುವ ನಮ್ಮ ಉತ್ಪಾದನ ಕ್ರಮದಲ್ಲಿ ಸಮಗ್ರವಾದ ಕ್ರಾಂತಿಯೂ ಅದರೊಡನೆ ನಮ್ಮ ಸಮಕಾಲೀನ ಸಾಮಾಜಿಕ ಕ್ರಮದ ಕ್ರಾಂತಿಯೂ ಅತ್ಯಗತ್ಯವಾಗುತ್ತದೆ.

ಈ ವರೆಗೆ ಚಾಲ್ತಿಯಲ್ಲಿರುವ ಎಲ್ಲ ಉತ್ಪಾದನಾ ಕ್ರಮಗಳೂ ಕೂಡ ದುಡಿಮೆಯ ಪ್ರತ್ಯಕ್ಷವಾದ ಉಪಯುಕ್ತ ಪರಿಣಾಮಗಳು ಮತ್ತು ಕೇವಲ ಸದ್ಯಃ ಫಲಗಳನ್ನು ಸಾಧಿಸುವ ಗುರಿಯನ್ನು ಪಡೆದಿವೆ. ಇದರ ಮುಂದಿನ ಪರಿಣಾಮಫಲಗಳು ತರುವಾಯ ವ್ಯಕ್ತಗೊಂಡು ಪುನರಾವೃತ್ತಿಯಿಂದ ಕ್ರಮಾಗತವಾಗಿ ಕೂಡಿ ಹಾಕಿಕೊಂಡು ಬೆಳೆದು ಕಾರ್ಯರೂಪವನ್ನು ತಾಳುತ್ತವಷ್ಟೆ, ಈ ಅಂಶವು ಸರ್ವಥಾ ಕಡೆಗಾಣಲ್ಪಟ್ಟಿತ್ತು. ಆದಿಯಲ್ಲಿದ್ದಂಥ ಸಮಷ್ಟಿಯಾದ ಭೂಮಾಲಿಕತ್ವವು, ಒಂದು ಕಡೆ, ತಮ್ಮ ಕಣ್ಣು ಮುಂದೆ ಎಷ್ಟಿತ್ತೋ ಅಷ್ಟಕ್ಕೆ ಮಾತ್ರ ತಮ್ಮ ದಿಗಂತವನ್ನು

ಮಿತಿಗೊಳಿಸಿಕೊಂಡಿದ್ದ ಮಾನವರ ಬೆಳವಣಿಕೆಯ ಘಟ್ಟಕ್ಕೆ ಅನುಗುಣವಾಗಿತ್ತು; ಮತ್ತು ಬೇರೊಂದು ಕಡೆ, ಯಥೇಚ್ಛವಾಗಿ ಭೂಮಿಯಿದ್ದೇ ಇದೆಯಲ್ಲ, ಒದಗುವ ಏರುಪೇರುಗಳನ್ನು ತಿದ್ದಿಕೊಳ್ಳಲು ಸಾಕಷ್ಟು ಅವಕಾಶವಿದ್ದೇ ಇದೆ ಎಂಬ ಊಹಾ ಪ್ರಜ್ಞೆಯನ್ನು, ಮುಂಭಾವನೆಯನ್ನು ಸೂಚಿಸುವಂತಿತ್ತು. ಈ ಯಥೇಚ್ಛವಾದ ಭೂಮಿಯು ಆಕ್ರಾಂತವಾದ ಮೇಲೆ, ಒಟ್ಟಿನ ಮಾಲಿಕತ್ವವು ನಶಿಸಿತು. ಉತ್ಪಾದ ನೆಯ ಎಲ್ಲ ಮೇಲ್ಮಟ್ಟದ ವಿಧಾನಗಳೂ ಜನರಾಶಿಯು ವಿವಿಧ ವರ್ಗಗಳಾಗಿ ಪ್ರತ್ಯೇಕ ಗೊಳ್ಳಲು ಎಡೆಗೊಟ್ಟವು: ಇದರಿಂದ ಒಡೆಯನಿಗೂ ಆಳಿಗೂ ವೈರತ್ವವು ತಳೆ ಯಿತು. ಈ ರೀತಿ ಒಡೆಯರ ವರ್ಗದ ಹಿತಪಾಲನೆಯೆ ಉತ್ಪಾದನೆಯ ಚಾಲಕ ಶಕ್ತಿಯಾಯಿತು, ಅಂದರೆ ಆಳುಗಳನ್ನು ಕೇವಲ ಪ್ರಾಣಸಹಿತ ಉಳಿಸಿರುವಷ್ಟು ದೂರ ಕಠೋರಗೊಳ್ಳದೆ ಇದ್ದಷ್ಟು ಮಟ್ಟಿಗೆ. ಇವತ್ತು ಪಶ್ಚಿಮ ಯೂರೋಪಿನಲ್ಲಿ ಚಾಲ್ತಿಯಲ್ಲಿರುವ ಉತ್ಪಾದನಾ ಕ್ರಮದಲ್ಲಿ ಈ ವಿಧಾನವು ಸಮಗ್ರವಾಗಿ ಪರಿ ಪೂರ್ಣವಾಗಿ ಆಚರಣೆಗೆ ತರಲ್ಪಟ್ಟಿದೆ. ಉತ್ಪಾದನೆ ಮತ್ತು ವಿನಿಮಯಗಳ ಪ್ರಭು ಗಳಾದ ವೈಯಕ್ತಿಕ ಬಂಡವಾಳಗಾರರು ತಮ್ಮ ಕಾರ್ಯ ವಿಧಾನಗಳ ಸದ್ಯ: ಫಲಗಳ ಪ್ರಯೋಜನಾಕಾಂಕ್ಷಿಗಳಾಗಿ ಮಾತ್ರ ಇದ್ದಾರೆ. ವಾಸ್ತವವಾಗಿ ಈ ಪ್ರಯೋಜನ ಕಾರಿಯಾದ ಪರಿಣಾಮಗಳೂ ಕೂಡ—ಅಂದರೆ ಉತ್ಪಾದನೆಗೊಂಡ ಅಥವಾ ವಿನಿ ಮಯಗೊಂಡ ಪದಾರ್ಥದ ಉಪಯುಕ್ತತೆಗೆ ಸಂಬಂಧಪಟ್ಟಷ್ಟು ಮಟ್ಟಿಗೆ–ನೇರವಾಗಿ ಹಿಂಬದಿಯನ್ನು ಸೇರುತ್ತವೆ. ಕಡೆಗುಳಿಯುವ ಏಕೈಕ ಪ್ರೇರಣೆಯೆಂದರೆ ಮಾರಾಟ ದಿಂದ ಬರುವ ಲಾಭಾಂಶವೆಷ್ಟೋ ಅಷ್ಟೆ.

* * * * * *

ಮಧ್ಯಮ ವರ್ಗದ ಸಾಮಾಜಿಕ ಶಾಸ್ತ್ರವೆನಿಸಿದ, ಪಾಂಡಿತ್ಯ ಶುದ್ಧವಾದ ಅರ್ಥಶಾಸ್ತ್ರವು, ಉತ್ಪಾದನೆ ಮತ್ತು ವಿನಿಮಯಗಳಿಗೆ ಸಂಬಂಧಿಸಿದಂತೆ ಮನುಷ್ಯನ ಮೇಲಾಗುವ ಸಾಮಾಜಿಕ ಪರಿಣಾಮಗಳನ್ನು ಮಾತ್ರ ಪ್ರತ್ಯಕ್ಷವಾಗಿ ನೇರವಾಗಿ ಪ್ರಧಾನವಾಗಿ ಕುರಿತದ್ದಾಗಿದೆ. ಇದು ಯಾವ ಸಾಮಾಜಿಕ ವ್ಯವಸ್ಥೆಯ ತಾತ್ವಿಕ ನಿರೂಪಣೆಯಾಗಿದೆಯೋ ಅದಕ್ಕೆ ತಕ್ಕುದೇ ಆಗಿದೆ. ವೈಯಕ್ತಿಕ ಬಂಡವಾಳಗಾರರು ಕೇವಲ ಸದ್ಯಃ ಪ್ರಯೋಜನವಾದ ಲಾಭಕ್ಕಾಗಿ ಮಾತ್ರ ಉತ್ಪಾದನೆ ಮತ್ತು ವಿನಿಮಯಗಳಲ್ಲಿ ನಿರತರಾಗಿರುವ ಕಾರಣ, ಸಮೀಪವಾದ ಸದ್ಯವಾದ ಪರಿಣಾಮ

ಗಳನ್ನು ಮಾತ್ರ ಅವರು ಲೆಕ್ಕಕ್ಕೆ ತೆಗೆದುಕೊಳ್ಳುತ್ತಾರೆ. ವೈಯಕ್ತಿಕ ತಯಾ
ಕನೂ ವ್ಯಾಪಾರಿಯೂ ತಯಾರಾದ ಅಥವಾ ಕೊಂಡುಕೊಂಡ ವಸ್ತುವ
ಸಾಮಾನ್ಯವಾಗಿ ಬಯಸುವಷ್ಟು ಲಾಭಕ್ಕೆ ಮಾರಿದರೆ ಸಾಕು, ಅವನು ಸಂ
ತೃಪ್ತನಾಗುತ್ತಾನೆ. ಆಮೇಲೆ ಆ ವಸ್ತುವಿಗಾಗಲಿ ಅದನ್ನು ಕೊಂಡವನಿಗಾಗ
ಏನಾದರೂ ಅವನಿಗೆ ಚಿಂತೆಯಿಲ್ಲ. ಈ ಕಾರ್ಯಗಳ ಪ್ರಾಕೃತಿಕ ಪರಿಣಾ
ಗಳಿಗೂ ಇದೇ ಮಾತು ಅನ್ವಯಿಸುತ್ತದೆ. ಕ್ಯೂಬದ ಪರ್ವತಗಳ ಇಳಿಜಾ
ರಲ್ಲಿದ್ದ ಕಾಡುಗಳನ್ನೆಲ್ಲ ಸುಟ್ಟುಹಾಕಿ, ಬಿದ್ದ ಬೂದಿಯಿಂದ ನೆಲಕ್ಕೆ ಗೊಬ್ಬರ ಬ
ಗಿಸಿ, ಒಂದು ತಲೆಮಾರು ಕಾಲ ಅತ್ಯಂತ ಲಾಭದಾಯಕವಾದ ಕಾಫಿ ಬೆಳೆಯನ್ನ
ಪಡೆದ ಸ್ಪಾನಿಷ್ ತೋಟಗಾರರಿಗೆ, ಭಾರಿ ಮಳೆಗಳಲ್ಲಿ ಫಲವತ್ತಾದ ಮೇಲ್ಮಣ್ಣೆಲ
ಕೊಚ್ಚಿಕೊಂಡು ಹೋಗಿ ಬರೀ ಕಲ್ಲುಗಟ್ಟಿ ನೆಲವು ಉಳಿದುಕೊಂಡದ್ದು ಯಾ
ಲಕ್ಷ್ಯ ತಾನೆ ಆಗಿತ್ತು? ಅವರಿಗೇನಂತೆ! ಸದ್ಯದ ಉತ್ಪಾದನಾ ಕ್ರಮವು ಪ್ರ
ತಿಯ ಬಗೆಗೂ, ಸಮಾಜದ ಬಗೆಗೂ ಮೊಟ್ಟಮೊದಲನೆಯ ಪ್ರತ್ಯಕ್ಷ ಪರಿಣಾ
ಗಳನ್ನು ಮಾತ್ರ ಕುರಿತು ಆಸಕ್ತಿ ವಹಿಸುತ್ತದೆ; ತರುವಾಯ ಈ ಉದ್ದೇಶ ಸಾಧ
ಯಲ್ಲಿ ಉಂಟಾಗುವ ದೂರದ ಪರಿಣಾಮಗಳು ಉದ್ದಿಷ್ಟ ರೀತಿಗೆ ತೀರ ವಿರೋ
ವಾದ ಭಿನ್ನ ಪರಿಣಾಮಗಳನ್ನು ಒದಗಿಸಿದರೆ, ಆಶ್ಚರ್ಯವನ್ನು ಕೂಡ ವ್ಯಕ್ತಪಡಿ
ಲಾಗುತ್ತದೆ. ಗಿರಾಕಿಗೂ ಸರಬರಾಜಿಗೂ ಸಾಮರಸ್ಯವೇರ್ಪಡುತ್ತದೆಂಬ ಭಾವ
ತದ್ವಿರುದ್ಧವಾಗುತ್ತದೆ, ಪ್ರತಿ ಹತ್ತು ವರ್ಷಗಳಿಗೊಮ್ಮೆ ಆರ್ಥಿಕಬಿಕ್ಕಟ್ಟು ಒದಗ
ತ್ತದೆ. ಸ್ವಂತ ಆಸ್ತಿಯನ್ನು ಬೆಳೆಸಿಕೊಳ್ಳುವ ವೈಯಕ್ತಿಕ ಮಾಲಿಕತ್ವದ ಆಧಾರ
ಮೇಲೆ ಏರ್ಪಟ್ಟ ಕ್ರಮವು ಕೆಲಸಗಾರರನ್ನು ಆಸ್ತಿರಹಿತರನ್ನಾಗಿ ಮಾಡುತ್ತದ
ಮತ್ತು ದುಡಿಮೆಯಲ್ಲಿ ನಿರತರಾಗದವರ ಕೈಯಲ್ಲಿ ಎಲ್ಲ ಸಂಪದವನ್ನೂ ಕೇಂದ್ರೀಕ
ಸುತ್ತದೆ ....

1876ರಲ್ಲಿ ಇದು ಎಗೆಂಲ್ಸ್‌ರಿಂದ ಬರೆಯಲ್ಪಟ್ಟಿತು. 1896ರಲ್ಲಿ ಜರ್ಮನಿಯ ನೂ
ಪತ್ರಿಕೆಯಲ್ಲಿ ಪ್ರಕಟವಾಗಿತ್ತು.

——

